ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೭ ಫೆಬ್ರವರಿ ೨೦೨೧ ಸಂಚಿಕೆ : ೦೨

ಜನವರಿ ೨೧ ರಂದು ಶ್ರೀಮಠದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದ್ವಿತೀಯ ವರ್ಷದ ಪುಣ್ಯಸ್ಮರಣೆ ಸಮಾರಂಭವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಕೇಂದ್ರ ಸಚಿವರಾದ ಶ್ರೀ ಪ್ರತಾಪಚಂದ್ರ ಸಾರಂಗಿ, ಉಪ ಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗದ್ದುಗೆಗೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ವಿಶೇಷ ಪೂಜೆ ಸಲ್ಲಿಸಿದರು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು.



ಮಾಗಡಿಯಲ್ಲಿ ಏರ್ಪಡಿಸಿದ್ದ ೩ನೇ ವರ್ಷದ ಶ್ರೀ ಸಿದ್ಧಲಿಂಗೇಶ್ವರ ಜಯಂತಿ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದ್ವಿತೀಯ ಪುಣ್ಯಸ್ಮರಣೆ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು, ಶ್ರೀ ಬಿ.ವೈ. ವಿಜಯೇಂದ್ರ, ಶ್ರೀ ಎಂ.ಪಿ. ರೇಣುಕಾಚಾರ್ಯ, ಶ್ರೀ ಬಿ.ಎಸ್. ಪರಮಶಿವಯ್ಯ, ಡಾ. ಶಂಕರ ಬಿದರಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೭ ಫೆಬ್ರವರಿ ೨೦೨೧ ಸಂಚಿಕೆ : ೦೨



ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.

## ಒಳಪುಟಗಳಲ್ಲಿ ..................



ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ಕರುನಾಡ ಪುಣ್ಯ, ಭರತಭೂಮಿಯ ಭಾಗ್ಯ, ಕರ್ನಾಟಕ ರತ್ನ, ಪದ್ಮಭೂಷಣ, ನಡೆದಾಡುವ ದೇವರು, ತ್ರಿವಿಧ ದಾಸೋಹದ ಜ್ಯೋತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದ್ವಿತೀಯ ಪುಣ್ಯಸ್ಮರಣೋತ್ಸವ ಜನವರಿ ೨೧, ೨೦೨೧ ರಂದು ಶ್ರೀಮಠದಲ್ಲಿ ಆಯೋಜಿಸಲಾಗಿತ್ತು. ಕರ್ನಾಟಕದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪನವರು ಉದ್ಘಾಟಿಸಿ "ವಿಶ್ವಮಾನವ ತತ್ತ್ವಸಾರಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಪ್ರತಿಯೊಬ್ಬರ ಮನದಲ್ಲಿ ಎಂದೆಂದಿಗೂ ವಿರಾಜಮಾನರಾಗಿದ್ದಾರೆ. ಧರ್ಮ, ಜಾತಿ ಭೇದವಿಲ್ಲದೆ ಕಾಯಕ ಮಾಡಿದ ಶ್ರೀಗಳು ಬಸವಣ್ಣನವರ ತತ್ತ್ವಗಳನ್ನು ಅನುಸರಿಸಿ ಧಾರ್ಮಿಕ ಸಂಸ್ಥೆಗಳ ಮಾನವೀಯ ಮುಖವನ್ನು ಜಗತ್ತಿಗೆ ತೋರಿಸಿ ದೇವರಾಗಿದ್ದಾರೆ" ಎಂದು ನುಡಿನಮನವನ್ನು ಸಲ್ಲಿಸಿದರು. ಭಕ್ತರು, ಅಭಿಮಾನಿಗಳ ಆಶಯದಂತೆ ಜನವರಿ ೨೧ ರಂದು ದಾಸೋಹ ದಿನವನ್ನಾಗಿ ಆಚರಿಸುವ ಕುರಿತು ಶೀಘ್ರವೇ ಸರ್ಕಾರದಿಂದ ಘೋಷಣೆ ಮಾಡಲಾಗುವುದು ಎಂಬ ಭರವಸೆಯನ್ನು ನೀಡಿದುದು ಭಕ್ತರಿಗೆ ಸಂತೋಷವನ್ನುಂಟು ಮಾಡಿತು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಭಕ್ತಿ ನಮನದಲ್ಲಿ "ಪೂಜ್ಯರ ಸ್ಮರಣೆಯೇ ನಮಗೆ ದರ್ಶನಾಶೀರ್ವಾದವಾಗಿದೆ. ಪೂಜ್ಯ ಶ್ರೀಗಳವರ ಸ್ಮರಣೆಯೇ ಲಕ್ಷಾಂತರ ಮಕ್ಕಳ ಬಾಳಲ್ಲಿ ಬೆಳಕಾಗಿರುತ್ತದೆ. ಪರಮಪೂಜ್ಯ ಶ್ರೀಗಳವರನ್ನು ಪಡೆದುಕೊಂಡಿದ್ದು ನಾಡಿನ ಪುಣ್ಯ ಎನ್ನುವ ಭಾವನೆ ಭಕ್ತರಲ್ಲಿದೆ. ಪರೋಪಕ್ಕಾರಕ್ಕಾಗಿಯೇ ದೇವರು ಭೂಮಿಗೆ ಕಳುಹಿಸಿದವರಲ್ಲಿ ಪೂಜ್ಯರು ಒಬ್ಬರು ಎಂದು ಹೇಳುವಾಗ ಧನ್ಯತಾಭಾವನೆ ಮೂಡುತ್ತದೆ" ಎಂದು ನುಡಿದರು.

ಕೇಂದ್ರ ಸಚಿವ ಶ್ರೀ ಪ್ರತಾಪ್‌ಚಂದ್ರ ಸಾರಂಗಿ ಅವರು ತಮ್ಮ ನುಡಿನಮನದಲ್ಲಿ "ಶ್ರೀಮಠದಲ್ಲಿ ೧೦ ಸಾವಿರ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದು, ಅವರಿಗೆಲ್ಲ ಉಚಿತ ಊಟ, ವಸತಿ ವ್ಯವಸ್ಥೆ ಕಲ್ಪಿಸಿಕೊಟಟಿರುವುದು ಅದ್ಭುತ. ಇದು ಸಾಮಾನ್ಯರಿಂದ ಸಾಧ್ಯವಾಗುವುದಿಲ್ಲ" ಎಂದು ಪೂಜ್ಯ ಶ್ರೀಗಳವರ ಅನನ್ಯ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿಸಿದರು.

ಇತ್ತೀಚೆಗೆ ಮಹಾರಾಷ್ಟ್ರದ ಮುಖ್ಯಮಂತ್ರಿ ಉದ್ಧವಠಾಕ್ರೆ ಅವರು ಬೆಳಗಾವಿ ಮಹಾರಾಷ್ಟ್ರಕ್ಕೆ ಸೇರಬೇಕು ಎಂಬ ಉದ್ಘಟತನ ಹೇಳಿಕೆಯನ್ನು ನೀಡಿ ಕನ್ನಡಿಗರ ಭಾವನೆಯನ್ನು ಕೆರಳಿಸಿದ್ದಾರೆ. ಈ ಹಿಂದೆ ಗಡಿವಿವಾದಕ್ಕೆ ಒಂದು ಶಾಶ್ವತ ಪರಿಹಾರವನ್ನು ಕಂಡುಕೊಳ್ಳಬೇಕು ಎಂಬ ದೃಷ್ಟಿಯಿಂದ ಮಹಾರಾಷ್ಟ್ರದವರೇ ಆಗಿದ್ದ ನ್ಯಾಯಮೂರ್ತಿ ಮಹಾಜನ್ ನೇತೃತ್ವದಲ್ಲಿ ಒಂದು ಆಯೋಗವನ್ನು ನೇಮಿಸಲಾಗಿತ್ತು. ಮಹಾಜನ್ ಅವರು ತಾವು ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ್ದ ವರದಿಯಲ್ಲಿ ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ ಎಂಬ ತೀರ್ಪು ನೀಡಿದ್ದನ್ನು ಠಾಕ್ರೆಯವರು ಮರೆತಂತೆ ಕಾಣುತ್ತದೆ. ಕನ್ನಡಿಗರು ಶಾಂತಿಪ್ರಿಯರು, ಸಹನಾಶೀಲರು. ಆದರೆ ನಾಡು, ನುಡಿ, ಗಡಿ ವಿಚಾರಕ್ಕೆ ಅನ್ಯಾಯವಾದಾಗ ಪ್ರತಿಭಟಿಸುವುದರಲ್ಲಿ, ಹೋರಾಟ ನಡೆಸುವಲ್ಲಿ ಹಿಂದೆ ಬೀಳುವರಲ್ಲ ಎಂಬುದನ್ನು ಈಗಾಗಲೇ ಅನೇಕ ಸಂದರ್ಭಗಳಲ್ಲಿ ಸಾಬೀತುಪಡಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಪಕ್ಷಾತೀತವಾಗಿ ಎಲ್ಲರೂ ಪ್ರತಿಭಟಿಸಿ ನಾವೆಲ್ಲರೂ ಒಂದೇ ಎಂಬುದನ್ನು ತೋರಿಸಬೇಕಾಗಿದೆ. ಮಹಾರಾಷ್ಟ್ರದ ಮುಖ್ಯಮಂತ್ರಿ ಇಂತಹ ಪ್ರಚೋದನಕಾರಿ ಹೇಳಿಕೆಗಳನ್ನು ನೀಡುವುದನ್ನು ನಿಲ್ಲಿಸಲಿ.

ಪ್ರೊ. ಹೆಚ್.ವಿ. ವೀರಭದ್ರಯ್ಯ
ಪ್ರಧಾನ ಸಂಪಾದಕರು







# ಶ್ರೀವಾಣಿ

## ಧರ್ಮಗಳ ಗುರಿ ಲೋಕಕಲ್ಯಾಣ

ಸಮ್ಮೇಳನಗಳು ಸಮಾನ ಮನಸ್ಸುಗಳನ್ನು ಸಂಘಟಿಸುವ ಸಕ್ರಿಯಗೊಳಿಸುವ ಸಕ್ರಮ ಚಿಂತನೆಗಳ ಪಠಿಸುವ ವಿಚಾರಶೀಲ ಕಮ್ಮಟಗಳು. ಧರ್ಮ ಸಮ್ಮೇಳನಗಳು ಆ ನಿಟ್ಟಿನಲ್ಲಿ ಮುನ್ನಡೆಯುವ ಲೋಕಕಲ್ಯಾಣ ನಿರತ ಸಂಘಟನೆಗಳು. ಧರ್ಮದ ಗುರಿ ಮಾನವೀಯತೆ. ಸಕಲ ಜೀವರಿಗೆ ಲೇಸನ್ನು ಬಯಸುವುದು. ದಾರಿ ಭಿನ್ನವಾಗಬಹುದು. ಗುರಿ ಮಾತ್ರ ಏಕ. ಎಲ್ಲ ನದಿಗಳ ಹಂಬಲ ಸಾಗರ ಸೇರುವುದಾಗಿರುವಂತೆ ಜಗತ್ತಿನ ಎಲ್ಲ ಧರ್ಮಗಳ ಗುರಿ ಲೋಕ ಕಲ್ಯಾಣ. ಧರ್ಮಗಳಲ್ಲಿ ಮೇಲು ಕೀಳೆಂಬುದಿಲ್ಲ. ಸಕಲಕೆಲ್ಲಕೆ ಅಕಳಂಕವಾದುದೇ ನಿಜವಾದ ಧರ್ಮ. ಮಹಾತ್ಮಗಾಂಧೀಜಿಯವರು ಹೇಳುವಂತೆ ರಾಮ ರಹೀಮರೊಂದೇ. ಸಬುಕೋ ಸನ್ಮತಿಯನ್ನು ನೀಡುವ ದಯಾಮೂಲವಾದ ಧರ್ಮ ಒಂದೇ ಆಗಿದೆ. ಮಾನವನ ಮಾನವತೆಯನ್ನು ವಿಶ್ವಬಂಧುತ್ವವನ್ನು ತಂದುಕೊಡುವ ಶಕ್ತಿ ಮಾತ್ರ ಧರ್ಮದಲ್ಲಿದೆ. ವಿನಯ ಹಾಗೂ ಪ್ರೇಮಗಳು ಧರ್ಮದ ಮೂಲಭೂತ ಗುಣಗಳು. ಅವು ಸಮಾಜದ ಏಳಿಗೆಯನ್ನು ಸಾಧಿಸುವಂತೆ ವ್ಯಕ್ತಿಯ ಉತ್ಕರ್ಷವನ್ನು ಉಂಟುಮಾಡುತ್ತವೆ. ಅವೆರಡೂ ದೈವೀಗುಣಗಳು.

ಸರ್ವಧರ್ಮ ಸಮ್ಮೇಳನಗಳು ವಿಶ್ವಭ್ರಾತೃತ್ವವನ್ನು ಸಾಧಿಸುವ ದೇವಸೋಪಾನಗಳಾಗಬೇಕು. ಆತ್ಮ ಆತ್ಮ ಮಥನಿಸಿ ಅನುಭಾವ ಹುಟ್ಟುವಂತಿರಬೇಕು. ಕೇವಲ ಗೋಜು ಗದ್ದಲಗಳು, ಆಡಂಬರದ ಒಣವಿಚಾರ ತರ್ಕಗಳ ವಾದ ವಿವಾದಗಳ ವೇದಿಕೆಗಳಾಗದೆ ಎಲ್ಲ ಧರ್ಮಗಳಲ್ಲಿರುವ ಪರಸ್ಪರ ಜೀವನ ಮೌಲ್ಯಗಳನ್ನು ಅರಿಯುವ ಆಚರಿಸುವ ಆದರ್ಶ ಸಮಾರಂಭಗಳಾಗಬೇಕು.

* * *

ಭರತಖಂಡ ಸರ್ವಧರ್ಮಗಳ ಸಮನ್ವಯದ ನೆಲೆವೀಡು. ಅದರಲ್ಲಿ ಕರ್ನಾಟಕವಂತೂ ಬೌದ್ಧ, ಜೈನ, ಶೈವ, ವೈಷ್ಣವ ಹೀಗೆ ಎಲ್ಲ ಧರ್ಮಗಳ ಸಂಗಮದ ಬೀಡು. ಈ ಕರ್ನಾಟಕದಲ್ಲಿ ಆಳಿದ ಮಹಾಪ್ರಭುಗಳು ಯಾವೊಂದು ಧರ್ಮವನ್ನು ಉಪೇಕ್ಷಿಸಿದವರಲ್ಲ. ಅವರು ಸರ್ವಧರ್ಮ ಸಹಿಷ್ಣುಗಳಾಗಿದ್ದರು. ಅವುಗಳ ರಕ್ಷಕರೂ ಆಗಿದ್ದರು.

ಭಾರತದ ಸಂಪತ್ತು ಆಧ್ಯಾತ್ಮಿಕತೆ ಅದು ಜಗತ್ತಿಗೆ ಕೊಟ್ಟಿರುವ ಅಮೂಲ್ಯ ಐಶ್ವರ್ಯ. ಪವಿತ್ರ ಹಿನ್ನೆಲೆಯುಳ್ಳ ಭಾರತೀಯರು ಶಾಂತಿ ಪ್ರಿಯರು, ಸ್ವಾತಂತ್ರ್ಯವನ್ನು ಶಾಂತಿಯಿಂದಲೇ ಪಡೆದುಕೊಂಡ ಅಹಿಂಸಾವಾದಿಗಳು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



ಮುಖದಲ್ಲಿ ಮಂತ್ರ, ಹೃದಯದಲ್ಲಿ ಧ್ಯಾನ
ಪ್ರಾಣದಲ್ಲಿ ಲಿಂಗನೆನಹು ಕರಿಗೊಂಡ
ಶಿವಾತ್ಮಶರಣನ ಹೃದಯವೆ
ಪರಮೇಶ್ವರಂಗೆ ನಿವಾಸಸ್ಥಾನ ನೆಲೆವನೆಯಾಗಿಪ್ಪುದಯ್ಯಾ,
ಆ ಪರಮೇಶ್ವರನೊಳಗಣ ಸಮರಸಭಾವವೆ
ಆ ಶರಣಂಗೆ ನಿತ್ಯನೇಮವೆ ಪೂಜೆಯಾಗಿಪ್ಪುದಯ್ಯಾ,
ಇದೆ ಪೂರ್ಣ ಶರಣಭಾವ, ಅಲ್ಲಿಯೇ ಲಿಂಗಸಿದ್ಧಿ,
ಘನಲಿಂಗಪದಸ್ಥಿತಿ, ಲಿಂಗಪೂಜೆ
ಮತ್ತಲ್ಲಿಯ ನಿಶ್ಚಯವದೇ ಪರಮಾರ್ಥ
ಅದಲ್ಲದೆ ಅನ್ಯಮಪ್ಪೆಲ್ಲವು ಆತ್ಮದುಃಖ ಕಾಣಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥

ಮುಖದಲ್ಲಿ ಮಂತ್ರ - ಜಿಹ್ವೆಯಲ್ಲಿ, ಮಂತ್ರ - ಷಡಕ್ಷರಿ ಮಂತ್ರವು; ಹೃದಯದಲ್ಲಿ - ಅಂತರಂಗದಲ್ಲಿ, ಧ್ಯಾನ - ಲಿಂಗಧ್ಯಾನ ಲಿಂಗಸ್ಮರಣೆಯು; ಪ್ರಾಣದಲ್ಲಿ ಲಿಂಗ ನೆನಹು: ಪ್ರಾಣದಲ್ಲಿ - ಪ್ರಾಣನಲ್ಲಿ, ಲಿಂಗ-ಪ್ರಾಣಲಿಂಗವು, ನೆನಹು-ಲಿಂಗಧ್ಯಾನ ಲಿಂಗಸ್ಮರಣೆಯು, ಕರಿಗೊಂಡ-ಇಂಬುಗೊಂಡ, ಶಿವಾತ್ಮಶರಣನ : ಶಿವಾತ್ಮ-ಶಿವನಂಶೀಭೂತವಾದ, ಶರಣನ-ಶಿವಶರಣನ, ಹೃದಯವೆ-ಅಂತರಂಗವೆ, ಪರಮೇಶ್ವರಂಗೆ-ಪ್ರಾಣಲಿಂಗಕ್ಕೆ, ನಿವಾಸಸ್ಥಾನ-ಆಲಯಸ್ಥಾನವು, ನೆಲೆವನೆಯಾಗಿಪ್ಪುದಯ್ಯಾ-ಸ್ಥಿರಮನೆಯಾಗಿಪ್ಪುದಯ್ಯಾ, ಆ ಪರಮೇಶ್ವರನೊಳಗಣ - ಆ ಪ್ರಾಣಲಿಂಗದೊಳಗಣ, ಸಮರಸಭಾವವೆ-ಅವಿರಳಭಾವದಿಂದ ಏಕರಸವಾಗುವ, ಅಭಿನ್ನಭಾವವೆ, ಆ ಶರಣಂಗೆ-ಶಿವಶರಣಂಗೆ, ನಿತ್ಯನೇಮವೆ-ಆವಾಗಲು ತಪ್ಪದೆ ಮಾಡುವ ಕಟ್ಟಿನ ಕ್ರಿಯೆಗಳ, ಪೂಜೆಯಾಗಿಪ್ಪುದಯ್ಯಾ, ಇದೇ ಪೂರ್ಣ ಶರಣಭಾವ ; ಇದೇ ಪೂರ್ಣ-ತುಂಬಲ್ಪಟ್ಟ, ಶರಣನ-ಶಿವಶರಣನ, ಭಾವ-ಮನಸ್ಸು; ಅಲ್ಲಿಯ-ಆ ಲಿಂಗದಲ್ಲಿಯ ಲಿಂಗಸಿದ್ಧಿ ಘನಲಿಂಗ ಪದಸ್ಥಿತಿ ಲಿಂಗಪೂಜೆ: ಲಿಂಗ-ತ್ರಿವಿಧ ಲಿಂಗವು-ಸಾಧ್ಯತವು, ಘನಲಿಂಗಪದಮಹಾಲಿಂಗಪದ, ಸ್ಥಿತಿ-ಇರವಿಕೆಯು, ಲಿಂಗಪೂಜೆ-ಲಿಂಗಾರ್ಚನೆಯು, ಮತ್ತೆಲ್ಲಿಯ ನಿಶ್ಚಯಮದೆ ಪರಮಾರ್ಥ; ಮತ್ತೆ-ಮರಳಿ, ಅಲ್ಲಿಯೆ- ಆ ಲಿಂಗದಲ್ಲಿಯೆ; ನಿಶ್ಚಯವದೆ-ಯತಾರ್ಥವದೆ, ಪರಮಾರ್ಥಮಿದಲ್ಲದೆ-ಯತಾರ್ಥಮಲ್ಲದೆ, ಅನ್ಯಮಪ್ಪೆಲ್ಲವು-ಬೀರಾದ ವೆಲ್ಲವು, ಆತ್ಮದುಃಖ-ಆತ್ಮನ ವೇಧೆಯು, ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ - ಸಂಪಾದಕರು - ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು - ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಎತ್ತೆತ್ತ ನೋಡಿದರೂ ಅತ್ತತ್ತ ನೀನೇ ಗುರುವೆ
ಸುತ್ತಮುತ್ತೆಲ್ಲಾ ನೀನಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾನೇನ ಮಾಡಲಿ ನನ್ನಲ್ಲಿ ಏನಿಹುದು
ನೀ ಕೊಟ್ಟುದ ನಿನಗೆ ಸಲಿಪೆನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿಯೆಲ್ಲ ಶಿವತತ್ತ್ವ ನಡೆಯೆಲ್ಲ ಕಲ್ಯಾಣ
ನಿನ್ನ ಕಾಯವೆ ಕೈಲಾಸ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾಡುವೆ ನಿನ್ನನು ಬೇಡುವೆ ನಿನ್ನನು
ಬಡವ ಸೆರಗೊಡ್ಡಿ ಬೇಡುವೆನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಮ ಪತಿಯಾಗಿರುವೆ ಶರಣ ಶಿವಸಂಕುಲಕೆ
ವರದಾನಿ ಬಸವ ಸಂತತಿಗೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುತ್ತೂರ ಶ್ರೀಗುರುವ ನಿತ್ಯ ನಿಜಜ್ಯೋತಿಯ
ಸತ್ಯ ಶಿವರಾತ್ರೀಶ ಮೂರುತಿಯ । ಸ್ಮರಿಸುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರಾಜೇಂದ್ರ ಸಿರಿಗುರುವ ರಾಜಗುರು ತಿಲಕರ
ಸುತ್ತೂರ ಸೂರ್ಯರ ಸ್ಮರಿಸುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಶಿಕೇಂದ್ರ ಗುರುವ ಕರೆತಂದ ಪುಣ್ಯರ
ಸುತ್ತೂರ ಕೀರುತಿಯ ಪೂಜ್ಯರ । ಸ್ಮರಿಸುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬುದ್ಧ ಭಗವಾನನಾದೆ ವರ್ಧಮಾನನಾದೆ
ಯೇಸುಕ್ರಿಸ್ತನಾಗಿ ಬೆಳಗಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಲ್ಲಾನು ನೀನಾದೆ ಎಲ್ಲರಿಗೆ ಬೇಕಾದೆ
ಎಲ್ಲಾ ಯುಗದ ಗುರು ನೀನಾದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



ವರದಿ

# ಶ್ರೀಮಠದಲ್ಲಿ ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದ್ವಿತೀಯ ಪುಣ್ಯಸ್ಮರಣೆ - ಹರಿದುಬಂದ ಭಕ್ತಸಾಗರ

ಶ್ರೀ ಸಿದ್ಧಗಂಗಾ ಮಠದಲ್ಲಿ ಹಬ್ಬದ ವಾತಾವರಣ. ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗದ್ದುಗೆಗೆ ಯಂತ್ರಧಾರಣೆ, ಮಂಚ, ಮಠದ ಮುಂಭಾಗವನ್ನು ವಿವಿಧ ಪುಷ್ಪಗಳಿಂದ ವಿಶೇಷವಾಗಿ ಅಲಂಕಾರ ಮಾಡಲಾಗಿತ್ತು. ಜನವರಿ ೨೧ರ ಬೆಳಗಿನ ಜಾವ ಶ್ರೀಗಳವರ ಗದ್ದುಗೆಯಲ್ಲಿ ನಡೆದ ಮಹಾರುದ್ರಾಭಿಷೇಕದ ನಂತರ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ವಿವಿಧ ಮಠಗಳ ಹರಗುರು ಚರಮೂರ್ತಿಗಳವರ ಸಮ್ಮುಖದಲ್ಲಿ ವಿಶೇಷ ಪೂಜೆ ಸಲ್ಲಿಸಿದರು. ಬಳಿಕ ಭಕ್ತರು ಮುಂಜಾನೆಯಿಂದ ರಾತ್ರಿಯವರೆಗೂ ನಿರಂತರವಾಗಿ ಗದ್ದುಗೆ ದರ್ಶನ ಮಾಡಿ ಧನ್ಯತೆಯನ್ನು ಪಡೆದರು. ಪುಣ್ಯಸ್ಮರಣೆಯನ್ನು ಕೋವಿಡ್‌ನಿಂದ ಸರಳವಾಗಿ ಆಚರಿಸಬೇಕೆಂದರೂ ನಿರೀಕ್ಷೆಗಿಂತಲೂ ಹೆಚ್ಚು ಭಕ್ತರು ಆಗಮಿಸಿ ಕಾರ್ಯಕ್ರಮದಲ್ಲಿ ಭಾಗಿಯಾಗಿ ಸಾರ್ಥಕ್ಯವನ್ನು ಪಡೆದರು.











ಬೆಳಿಗ್ಗೆ ೮ ಗಂಟೆಗೆ ಪೂಜ್ಯ ಶ್ರೀಗಳವರ ಭಾವಚಿತ್ರವನ್ನು ಬೆಳ್ಳಿರಥದಲ್ಲಿರಿಸಿ ಶ್ರೀಮಠದ ಆವರಣದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಶ್ರೀ ದೇಗುಲಮಠದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಹಾಗೂ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ವೀರಗಾಸೆ, ನಂದೀಧ್ವಜ ಹಾಗೂ ಪೂರ್ಣಕುಂಭ ಹೊತ್ತ ಸುಮಂಗಲೆಯರು ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಭಕ್ತರು, ಅಭಿಮಾನಿಗಳು ಹೆಜ್ಜೆ ಹಾಕುತ್ತಾ ಈ ಸುಂದರ ದೃಶ್ಯವನ್ನು ಕಣ್ತುಂಬಿಕೊಂಡು ಜೀವನ ಪಾವನವಾಯಿತೆಂದು ಕೊಂಡರು.

**ಮುಖ್ಯಮಂತ್ರಿಗಳಿಂದ ಗದ್ದುಗೆಗೆ ವಿಶೇಷ ಪೂಜೆ :** ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ನಿಗದಿತ ಅವಧಿಗಿಂತ ಅರ್ಧಗಂಟೆ ಮುಂಚಿತವಾಗಿ ಶ್ರೀಮಠಕ್ಕೆ ಆಗಮಿಸಿ ಪೂಜ್ಯ ಶ್ರೀಗಳವರ ಗದ್ದುಗೆಗೆ ತೆರಳಿ ವಿಶೇಷ ಪೂಜೆ ಸಲ್ಲಿಸಿದರು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮುಖ್ಯಮಂತ್ರಿಗಳ ಹಣೆಗೆ ಭಸ್ಮಧಾರಣೆ ಮಾಡಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಹರಿಹರ ಪಂಚಮಸಾಲಿ ಗುರುಪೀಠದ ಪೂಜ್ಯ ಶ್ರೀ ಶ್ರೀ ವಚನಾಂದ ಸ್ವಾಮಿಗಳು, ಕೇಂದ್ರ ಸಚಿವ ಶ್ರೀ ಪ್ರತಾಪಚಂದ್ರ ಸಾರಂಗಿ, ಉಪ ಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ, ಸಂಸದ ಶ್ರೀ ಜಿ.ಎಸ್. ಬಸವರಾಜು ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ತ್ರಿವಿಧ ದಾಸೋಹಿ, ಆಧ್ಯಾತ್ಮದ ಮಹಾಬೆಳಗು, ಮಾನವೀಯತೆಯ ಸಾಕಾರಮೂರ್ತಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದ್ವಿತೀಯ ಪುಣ್ಯಸಂಸ್ಮರಣೆ ಸಮಾರಂಭವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.

ಅವರು ತಮ್ಮ ಉದ್ಘಾಟನಾ ಭಾಷಣದಲ್ಲಿ "ವಿಶ್ವಮಾನವ ತತ್ತ್ವ ಸಾರಿದ ಶ್ರೀ ಸಿದ್ಧಗಂಗಾ ಮಠದ ಲಿಂಗೈಕ್ಯ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಪ್ರತಿಯೊಬ್ಬರ ಮನದಲ್ಲಿ ಎಂದೆಂದಿಗೂ ವಿರಾಜಮಾನರಾಗಿದ್ದಾರೆ. ಧರ್ಮ, ಜಾತಿ ಭೇದವಿಲ್ಲದೆ ಕಾಯಕ ಮಾಡಿದ ಶ್ರೀಗಳು ಬಸವಣ್ಣನವರ ತತ್ತ್ವಗಳನ್ನು ಅನುಸರಿಸಿ ಧಾರ್ಮಿಕ ಸಂಸ್ಥೆಗಳ ಮಾನವೀಯ ಮುಖವನ್ನು ಜಗತ್ತಿಗೆ ತೋರಿಸಿ ದೇವರಾಗಿದ್ದಾರೆ. ಎಲ್ಲರೂ ನನ್ನವರೆನ್ನುವ ಭಾವದಿಂದ ದಿವ್ಯಸಂದೇಶ ಸಾರಿದ ಶ್ರೀಗಳು ಶತಮಾನಗಳ ಪಲ್ಲಟಗಳಿಗೆ ಸಾಕ್ಷಿಯಾಗಿದ್ದಾರೆ. ಭೌತಿಕವಾಗಿ ನಮ್ಮಿಂದ ದೂರವಾಗಿದ್ದರೂ, ಅವರು ಮಾಡಿದ ಅನನ್ಯ ಸೇವೆಯಿಂದ ಸದಾ ನಮ್ಮಲ್ಲಿ ನೆಲೆಸಿದ್ದಾರೆ. ಆಗಿಂದಾಗ್ಗೆ ಶ್ರೀಮಠಕ್ಕೆ ಬಂದು ಪೂಜ್ಯ ಶ್ರೀ ಶ್ರೀಗಳವರನ್ನು ದರ್ಶನ ಮಾಡಿ, ಮಾರ್ಗದರ್ಶನ, ಸಲಹೆ ಪಡೆಯುತ್ತಿದ್ದೆ. ಅವರು ಆಶೀರ್ವಾದ ಮಾಡಿದರೆ ನಮ್ಮೆಲ್ಲರ ಕಷ್ಟಗಳು ದೂರವಾಗುತ್ತಿದ್ದವು. ಶ್ರೀಮಠಕ್ಕೆ ಬಂದಾಗ ಪ್ರಸಾದ ಸ್ವೀಕರಿಸದೇ ಹೋಗುವಂತಿರಲಿಲ್ಲ. ಅಂತಹ ದೇವರನ್ನು ಸ್ಮರಿಸುತ್ತಿದ್ದೇವೆ. ಪ್ರತಿನಿತ್ಯ ನನ್ನ ದಿನಚರಿಯನ್ನು ಶ್ರೀಗಳವರ ಸ್ಮರಣೆ ಮಾಡಿಕೊಂಡು ಆರಂಭಿಸುತ್ತೇನೆ" ಎಂದು ಹೇಳಿದರು. "ಪರಮಪೂಜ್ಯ ಶ್ರೀಗಳವರ ಜನ್ಮಸ್ಥಳವಾದ ವೀರಾಪುರ ತೀರ್ಥಕ್ಷೇತ್ರವಾಗಬೇಕು ಎಂಬ ಅಪೇಕ್ಷೆ ನಮ್ಮದು. ನನ್ನ ಬದುಕಿನ ಕೊನೆ ಉಸಿರು ಇರುವವರೆಗೂ







ಸಿದ್ಧಗಂಗಾ ಕ್ಷೇತ್ರದ ಸರ್ವಾಂಗೀಣ ಅಭಿವೃದ್ಧಿಗಾಗಿ ತೊಡಗಿಸಿಕೊಳ್ಳುವುದೇ ನನ್ನ ಪುಣ್ಯ ಕೆಲಸವೆಂದು ಭಾವಿಸಿದ್ದೇನೆ" ನುಡಿದರು.

**ದಾಸೋಹ ದಿನ :** ಇನ್ನು ಮುಂದೆ ಜನವರಿ ೨೧ ರಂದು ಪರಮಪೂಜ್ಯರ ಪುಣ್ಯಸ್ಮರಣೆಯನ್ನು ದಾಸೋಹ ದಿನವನ್ನಾಗಿ ಘೋಷಿಸಲಾಗುವುದು ಎಂದು ಶ್ರೀ ಬಿ.ಎಸ್. ಯಡಿಯೂರಪ್ಪನವರು ಭರವಸೆ ನೀಡಿದರು.

**೧೦ ಕೋಟಿ ರೂ. ಶೀಘ್ರ ಬಿಡುಗಡೆ :** ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಕಳೆದ ವರ್ಷ ಸಿದ್ಧಗಂಗಾ ಮಠಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಪೂಜ್ಯ ಶ್ರೀಗಳವರ ವಸ್ತು ಸಂಗ್ರಾಹಲಯಕ್ಕೆ ಶಂಖುಸ್ಥಾಪನೆ ನೆರವೇರಿಸಿದ್ದು, ಉದ್ದೇಶಿತ ಈ ಯೋಜನೆ ಸಾಕಾರಗೊಳ್ಳಲು ಶೀಘ್ರವೇ ೧೦ ಕೋಟಿ ರೂ. ಅನುದಾನ ಬಿಡುಗಡೆ ಮಾಡಲಾಗುವುದು ಎಂದು ಮುಖ್ಯಮಂತ್ರಿಗಳು ಆಶ್ವಾಸನೆ ನೀಡಿದರು.

**ವೀರಾಪುರದಲ್ಲಿ ೧೧೧ ಅಡಿ ಶ್ರೀಗಳ ಪ್ರತಿಮೆ :** ನೂರಹನ್ನೊಂದು ವರ್ಷಗಳ ಕಾಲ ಭಕ್ತರ ಪಾಲಿಗೆ ನಡೆದಾಡುವ ದೇವರಾಗಿದ್ದ ಪೂಜ್ಯ ಶ್ರೀಗಳ ಬದುಕು ಮತ್ತು ವ್ಯಕ್ತಿತ್ವ ಸಾರುವ ಉದ್ದೇಶದಿಂದ ಅವರಿಗೆ ಜನ್ಮ ನೀಡಿದ ಪುಣ್ಯಗ್ರಾಮ ವೀರಾಪುರದಲ್ಲಿ ನೂರಹನ್ನೊಂದು ಅಡಿ ಪುತ್ಥಳಿ ಸ್ಥಾಪನೆಗೆ ಹಾಗೂ ವೀರಾಪುರದ ಸಮಗ್ರ ಅಭಿವೃದ್ಧಿಗೆ ೮೦ ಕೋಟಿ ಮೀಸಲಿಡಲಾಗಿದ್ದು ೨೫ ಕೋಟಿ ರೂ.ಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ ಎಂದು ಮುಖ್ಯಮಂತ್ರಿಗಳು ಹೇಳಿದರು. ಇದೇ ಸಂದರ್ಭದಲ್ಲಿ ಸರ್ಕಾರ ಯೋಜಿಸಿರುವ ಪೂಜ್ಯ ಶ್ರೀಗಳವರ ೧೧೧ ಅಡಿ ಎತ್ತರದ ಪ್ರತಿಮೆ ಸ್ಥಾಪನೆ ಮತ್ತು ಗ್ರಾಮದ ಅಭಿವೃದ್ಧಿ ಕುರಿತ ೩ ವಿಡಿಯೋವನ್ನು ಬಿಡುಗಡೆ ಮಾಡಲಾಯಿತು. ಈ ವಿಡಿಯೋದಲ್ಲಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೧ ಅಡಿ ಎತ್ತರದ ಪ್ರತಿಮೆಯ ಗ್ರಾಫಿಕ್ಸ್ ಮಾದರಿ ಈ ೩ಡಿ ವಿಡಿಯೋದಲ್ಲಿದೆ. ಪ್ರತಿಮೆ ಕೆಳಭಾಗದಲ್ಲಿ ನಿರ್ಮಾಣವಾಗುವ ೬೫ x ೭೦ ಅಡಿ ಅಳತೆಯ ಕಟ್ಟಡ, ಪಕ್ಕದಲ್ಲಿ ನಿರ್ಮಾಣವಾಗಲಿರುವ ನಂದಿ ವಿಗ್ರಹ, ಜ್ಞಾನಮಂದಿರ, ಸಮುದಾಯ ಭವನ, ಪೂಜ್ಯ ಶ್ರೀಗಳವರ ಬದುಕಿನ ಸಂಪೂರ್ಣ ಚಿತ್ರ ಸಹಿತ ಮಾಹಿತಿ,



ಆಧ್ಯಾತ್ಮಭವನ, ಧ್ಯಾನಮಂದಿರ, ಅನ್ನದಾಸೋಹದ ವ್ಯವಸ್ಥೆ ಸೇರಿದಂತೆ ವಿವಿಧ ಸೌಲಭ್ಯಗಳ ಮಾಹಿತಿ ಈ ವಿಡಿಯೋದಲ್ಲಿದೆ.

ಜನವರಿ ೨೨ ರಂದು ಮಾಗಡಿ ತಾಲ್ಲೂಕು ವೀರಾಪುರದಲ್ಲಿ ಪೂಜ್ಯ ಶ್ರೀಗಳವರ ಪ್ರತಿಮೆ ನಿರ್ಮಾಣ ಕಾಮಗಾರಿಗೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹರಗುರು ಚರಮೂರ್ತಿಗಳ ಸಮ್ಮುಖದಲ್ಲಿ ಭೂಮಿಪೂಜೆ ನೆರವೇರಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಕೇಂದ್ರ ಸಚಿವ ಶ್ರೀ ಪ್ರತಾಪಚಂದ್ರ ಸಾರಂಗಿ ಅವರು ಕನ್ನಡದಲ್ಲಿಯೇ ಮಾತನಾಡಿ ಭಕ್ತರು, ಅಭಿಮಾನಿಗಳ ಪ್ರಶಂಸೆಗೆ ಪಾತ್ರರಾದರು. ನನಗೆ ಕನ್ನಡ ಬರುವುದಿಲ್ಲ. ಆದರೆ ಕನ್ನಡವನ್ನು ಅರ್ಥ ಮಾಡಿಕೊಳ್ಳುತ್ತೇನೆ. ನನಗೆ ಕನ್ನಡಭಾಷೆ ಎಂದರೆ ಪ್ರಿಯ. "ಶ್ರೀಮಠದ ಭಕ್ತರನ್ನು ನೋಡಿ ಸಂತೋಷವಾಗುತ್ತಿದೆ. ಇಲ್ಲಿ ೧೦ ಸಾವಿರ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಅವರೆಲ್ಲರಿಗೂ ಊಟ, ವಸತಿ ವ್ಯವಸ್ಥೆ ಕಲ್ಪಿಸಿರುವುದು ಅದ್ಭುತ. ಇದು









ಸಾಮಾನ್ಯರಿಂದ ಸಾಧ್ಯವಾಗುವುದಿಲ್ಲ" ಎಂದು ಪೂಜ್ಯ ಶ್ರೀಗಳವರ ಸೇವೆಯನ್ನು ತುಂಬು ಹೃದಯದಿಂದ ಶ್ಲಾಘಿಸಿದರು.

"ಪೂಜ್ಯ ಶ್ರೀಗಳು ಇಂದು ಭೌತಿಕವಾಗಿ ನಮ್ಮ ಮುಂದೆ ಇಲ್ಲದೇ ಹೋದರೂ, ಅವರು ಮಾಡಿದ ಸಾಧನೆ, ಬಿಟ್ಟು ಹೋದ ಆದರ್ಶಗಳ ಮೂಲಕ ಜೀವಂತವಾಗಿದ್ದಾರೆ. ಪ್ರಕೃತಿಯನ್ನು ಉಳಿಸುವಲ್ಲಿ ಮಠ, ಆಶ್ರಮ, ಗುರುಕುಲಗಳ ಕೊಡುಗೆ ಅಪಾರವಾಗಿದ್ದು ಪಾಶ್ಚಾತ್ಯ ಸಂಸ್ಕೃತಿಗೆ ಮಾರುಹೋಗುವ ನಾವು ದೇವಭಾಷೆ, ವೈಜ್ಞಾನಿಕ ಅಂತಃಸತ್ವವುಳ್ಳ ಭಾಷೆ ಸಂಸ್ಕೃತವನ್ನು ಉಪೇಕ್ಷಿಸಿದ್ದೇವೆ. ಶ್ರೀಮಠದಲ್ಲಿ ಸಂಸ್ಕೃತ ಶಿಕ್ಷಣವನ್ನು ಮಕ್ಕಳಿಗೆ ಕಡ್ಡಾಯಗೊಳಿಸಿರುವುದು ಪ್ರಾಚೀನ ಗುರುಕುಲ ಪದ್ಧತಿ ಶಿಕ್ಷಣವನ್ನು ನೆನಪಿಗೆ ತರುತ್ತದೆ. ಸುಸಂಸ್ಕೃತ ವ್ಯಕ್ತಿಗಳನ್ನು ಸೃಷ್ಟಿಸುವ ಶಿಕ್ಷಣವನ್ನು ಮಕ್ಕಳಿಗೆ ಕಲಿಸುತ್ತಿರುವುದು ಅಭಿನಂದನಾರ್ಹವಾದುದು" ಎಂದು ನುಡಿದರು.

ಉಪ ಮುಖ್ಯಮಂತ್ರಿ ಹಾಗೂ ಉನ್ನತ ಶಿಕ್ಷಣ ಸಚಿವ ಡಾ. ಸಿ.ಎನ್. ಅಶ್ವತ್ಥನಾರಾಯಣ ಅವರು ಮಾತನಾಡಿ "ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಕಿಕೊಟ್ಟ ತ್ರಿವಿಧ ದಾಸೋಹ ಮಾರ್ಗ, ಸಮಾಜ ಏಳಿಗೆಯ ಸೂತ್ರಗಳು. ಇಡೀ ನಾಡಿಗೆ ಮಾರ್ಗದರ್ಶಕವಾಗಿವೆ. ಶ್ರೀಮಠದಲ್ಲಿ ಆಶ್ರಯ ಪಡೆದು ಬೆಳೆದ ಮಕ್ಕಳು ಇಂದು ಜಗದ ಎಲ್ಲೆಡೆ ಉನ್ನತ ಹುದ್ದೆಗಳನ್ನು ಅಲಂಕರಿಸಿ ಸಾಧನೆ ಮಾಡುತ್ತಿದ್ದಾರೆ. ವಿದ್ಯಾರ್ಥಿಗಳಲ್ಲಿ ಸಮರ್ಥ ವ್ಯಕ್ತಿತ್ವ ನಿರ್ಮಾಣ ಮಾಡುವ ನಿಟ್ಟಿನಲ್ಲಿ ಪೂಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶಯವನ್ನು ಈಡೇರಿಸುವಂತಹ ಪಠ್ಯವನ್ನು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಅಳವಡಿಸಲಾಗುವುದು" ಎಂದು ಹೇಳಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಶ್ರೀ ಸಿದ್ಧಗಂಗಾ ಮಠದ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಭಕ್ತಿನಮನದಲ್ಲಿ "ನಡೆದಾಡುವ ದೇವರು, ತ್ರಿವಿಧ ದಾಸೋಹಮೂರ್ತಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಬದುಕಿನುದ್ದಕ್ಕೂ ತ್ಯಾಗ, ಕಾಯಕ, ದಾಸೋಹದ ಮೂಲಕ ಸಮಾಜಕ್ಕೆ ತಮ್ಮ ಸೇವೆಯನ್ನು ಅರ್ಪಣೆ ಮಾಡಿದರು. ನಿಸ್ವಾರ್ಥದಿಂದ ತನು, ಮನ, ಧನವನ್ನು ಅರ್ಪಿಸುವ ಮೂಲಕ ನಾಡಿಗೆ ಬೆಳಕು ನೀಡಿದರು. ಕಳೆದ ಎರಡು ವರ್ಷಕ್ಕಿಂತ ಮುಂಚೆ ನಮಗೆಲ್ಲ ಶ್ರೀಗಳ ದರ್ಶನಾಶೀರ್ವಾದ ದೊರೆಯುತ್ತಿತ್ತು. ಎರಡು ವರ್ಷದ ನಂತರ ಅವರ ಸ್ಮರಣೆಯೇ ನಮಗೆ ದರ್ಶನಾಶೀರ್ವಾದವಾಗಿದೆ. ಪೂಜ್ಯ ಶ್ರೀಗಳವರ ಸ್ಮರಣೆಯೇ ಲಕ್ಷಾಂತರ ಮಕ್ಕಳ ಬಾಳಲ್ಲಿ ಬೆಳಕಾಗಿರುತ್ತದೆ. ಶ್ರೀಗಳವರ ಆರಾಧನೆಯೇ ಮಕ್ಕಳ ಬದುಕಿಗೆ ಸುಗಮ ದಾರಿಯಾಗಲಿದೆ" ಎಂದು ನುಡಿದರು.

"ಪರಮಪೂಜ್ಯ ಶ್ರೀಗಳವರನ್ನು ಪಡೆದುಕೊಂಡಿದ್ದ ನಾಡಿನ ಪುಣ್ಯ ಎನ್ನುವ ಭಾವನೆ ಭಕ್ತರಲ್ಲಿದೆ. ಪರೋಪಕಾರಕ್ಕಾಗಿ ಭಗವಂತ ಭೂಮಿಗೆ ಕಳುಹಿಸಿದವರಲ್ಲಿ ಪೂಜ್ಯರು ಒಬ್ಬರು ಎಂದು ಹೇಳುವಾಗ ಧನ್ಯತಾಭಾವನೆ ಮೂಡುತ್ತದೆ. ಗ್ರಾಮೀಣ ಮಕ್ಕಳ ಭವಿಷ್ಯ ಚೆನ್ನಾಗಿರಬೇಕೆಂದು ಮಕ್ಕಳಿಗೆ ಉಚಿತ ಶಿಕ್ಷಣ ನೀಡಿದರು. ಮಠಕ್ಕೆ ಆಶ್ರಯ ಬೇಡಿ ಬಂದ ಮಕ್ಕಳಿಗೆ ಯಾವ ಕಾರಣಕ್ಕೂ ಅವಕಾಶವನ್ನು ನಿರಾಕರಿಸಲಿಲ್ಲ. ಎಲ್ಲರಿಗೂ ಆದರ್ಶಪೂರ್ಣ ಜೀವನವನ್ನು ನಮಗೆಲ್ಲರಿಗೂ ನೀಡಿದ್ದಾರೆ. ನೂರಹನ್ನೊಂದು ವರ್ಷಗಳ ಕಾಲ ವಿಶ್ವಕ್ಕೆ ಚೇತನರಾಗಿ ಬದುಕಿದ್ದ ಶ್ರೀಗಳಿಗೆ ಶ್ರೀಮಠದಲ್ಲಿ ಸದಾ ಮಕ್ಕಳು ಹಾಗೂ ದನಕರುಗಳು ಓಡಾಡುತ್ತಿರಬೇಕು ಎಂಬುದು ಶ್ರೀಗಳ ಆಸೆಯಾಗಿತ್ತು" ಎಂದು ಸ್ಮರಿಸಿಕೊಂಡರು.

"ಕಾಯಕ ಮತ್ತು ದಾಸೋಹ ಬಸವಣ್ಣನವರು ಭಾರತಕ್ಕೆ ನೀಡಿದ್ದರು. ಆತ್ಮನಿರ್ಭರ ಭಾರತವನ್ನು ೧೨ನೇ







ಶತಮಾನದಲ್ಲಿಯೇ ನೀಡಿದ್ದರು. ಸಮಾಜ ಮತ್ತು ವ್ಯಕ್ತಿ ಉತ್ತಮವಾಗಲು ಕಾಯಕ ನಿಷ್ಠರಾಗಬೇಕು. ಮಕ್ಕಳಿಗೆ ಉತ್ತಮ ಶಿಕ್ಷಣ ನೀಡಿದರೆ ಮಾತ್ರ ದೇಶಕ್ಕೆ ಭವಿಷ್ಯ ಎಂದು ಅರಿತು ಸೇವೆ ಸಲ್ಲಿಸಿದರು" ಎಂದು ಹೇಳಿದರು.

"ಪೂಜ್ಯ ಶ್ರೀಗಳವರು ತನು ಮನ ಧನವನ್ನು ಸಮಾಜಕ್ಕೆ ಅರ್ಪಿಸಿ ಕರ್ಪೂರ ತನ್ನನ್ನು ಸುಟ್ಟುಕೊಂಡು ಬೆಳಕು ನೀಡಿದಂತೆ ಕಾಯಕದ ಮೂಲಕ ತಮ್ಮನ್ನು ಸುಟ್ಟುಕೊಂಡು ನಾಡಿಗೆ ಬೆಳಕು ನೀಡಿದ್ದಾರೆ. ಶ್ರೀಮಠದಲ್ಲಿ ಶ್ರೀಗಳು ಇಂದಿಗೂ ಇದ್ದಾರೆ ಎನ್ನುವ ಭಾವನೆ ನಮ್ಮೆಲ್ಲರಲ್ಲಿದೆ. ಶ್ರೀಗಳ ಅನುಗ್ರಹ, ಅವರ ತಪಸ್ಸಿನ ಶಕ್ತಿ ನಮ್ಮೆಲ್ಲರಿಗೂ ಸ್ಫೂರ್ತಿಯಾಗಿದೆ. ಅವರ ಆಶೀರ್ವಾದ ಎಲ್ಲಾ ಭಕ್ತರಿಗೆ ಲಭಿಸುತ್ತಿದೆ. ತೆರೆದ ಪುಸ್ತಕದಂತೆ ಜೀವನ ನಡೆಸಿರುವ ಅವರ ಬದುಕೇ ನಮಗೆ ದಿವ್ಯ ಸಂದೇಶವಾಗಿದೆ. ೮೯ ವರ್ಷಗಳ ಕಾಲ ಶ್ರೀಮಠವನ್ನು ಉತ್ತುಂಗಕ್ಕೆ ಏರಿಸಿದ್ದಾರೆ" ಎಂದು ನುಡಿ ನಮನ ಸಲ್ಲಿಸಿದರು.

**ಅರೋಗ್ಯ ಮಹಾದಾಸೋಹ :** ನಮ್ಮೆಲ್ಲರ ಆರಾಧ್ಯದೈವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದ್ವಿತೀಯ ವರ್ಷದ ಪುಣ್ಯಸ್ಮರಣೆಯ ಅಂಗವಾಗಿ ಜನವರಿ ೨೧ ರಿಂದಲೇ ಜಾರಿಗೆ ಬರುವಂತೆ ಶ್ರೀಗಳವರ ತ್ರಿವಿಧ ದಾಸೋಹದ ಹಾದಿಯಲ್ಲಿ 'ಆರೋಗ್ಯ ಮಹಾದಾಸೋಹ' ಸೇವೆಯನ್ನು ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ವಿದ್ಯುಕ್ತವಾಗಿ ಚಾಲನೆ ನೀಡಿದರು. ಸಿದ್ಧಗಂಗಾ ಆಸ್ಪತ್ರೆಯಲ್ಲಿ ರೋಗಿಗಳಿಗೆ ಉಚಿತ ಸಂಜೆ ಕ್ಲಿನಿಕ್ ತೆರೆದಿದ್ದು ಪ್ರತಿಯೊಬ್ಬರೂ ಅರೋಗ್ಯವನ್ನು ಪರೀಕ್ಷಿಸಿಕೊಂಡು ತಜ್ಞವೈದ್ಯರಿಂದ ಸಮಾಲೋಚನೆ ನಡೆಸಬಹುದು. ಇದರ ಜೊತೆಗೆ ೧೧೧ ಗ್ರಾಮ



ಪಂಚಾಯತಿಗಳಲ್ಲಿ ಉಚಿತ ಆರೋಗ್ಯ ಶಿಬಿರ ಏರ್ಪಡಿಸಲಾಗುತ್ತಿದೆ. ಉಚಿತ ಆರೋಗ್ಯ ಪರೀಕ್ಷೆ ಹಾಗೂ ಉಚಿತ ಔಷಧಿ ನೀಡಲಾಗುವುದು. ಈ ಸಂದರ್ಭದಲ್ಲಿ ಆಸ್ಪತ್ರೆಯ ವ್ಯವಸ್ಥಾಪಕ ನಿರ್ದೇಶಕ ಡಾ. ಎಸ್. ಪರಮೇಶ ಅವರು ಉಪಸ್ಥಿತರಿದ್ದರು.

**ವಿಶೇಷ ಪುರಾವಣಿ ಹಾಗೂ ಕೃತಿ ಲೋಕಾರ್ಪಣೆ :** ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಎರಡನೆಯ ಪುಣ್ಯಸ್ಮರಣೆಯ ಪ್ರಯುಕ್ತ ವಿಜಯ ಕರ್ನಾಟಕ ಹೊರತಂದ "ಸ್ಮರಣಾಂಜಲಿ"ಯನ್ನು ಹಾಗೂ ವಿಜಯವಾಣಿ ಹೊರತಂದ "ಸಿದ್ಧಗಂಗೆಯ ದೇವರು" ವಿಶೇಷ ಪುರಾವಣಿಯನ್ನು ಹಾಗೂ ನಿವೃತ್ತ ಪ್ರಾಧ್ಯಾಪಕ ಶ್ರೀ ಕೋ.ರಂ. ಬಸವರಾಜು ಅವರು ಸಂಗ್ರಹಿಸಿ ವ್ಯಾಖ್ಯಾನ ಮಾಡಿರುವ ಪಂಡಿತ ಚನ್ನಪ್ಪ ಎರೇಸೀಮೆ ವಿರಚಿತ ಉದ್ದಾನೇಶ ಚರಿತೆಯಿಂದ ಆಯ್ದ ಕಥಾಭಾಗ "ಶ್ರೀ



ಶಿವಕುಮಾರ ಗುರುಚಾರಿತ್ರಸಂಗ್ರಹ"ವನ್ನು ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಲೋಕಾರ್ಪಣೆ ಮಾಡಿದರು.

ವೇದಿಕೆಯಲ್ಲಿ ಕನಕಪುರ ಶ್ರೀ ದೇಗುಲಮಠದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಹರಿಹರ ಪಂಚಮಶಾಲಿ ಗುರುಪೀಠದ ಪೂಜ್ಯ ಶ್ರೀ ಶ್ರೀ ವಚನಾನಂದ ಸ್ವಾಮಿಗಳು, ಕೇಂದ್ರ ಸಚಿವ ಶ್ರೀ ಪ್ರತಾಪಚಂದ್ರ ಸಾರಂಗಿ, ಸಚಿವರಾದ ಶ್ರೀ ಜಗದೀಶ ಶೆಟ್ಟರ, ಉಪ ಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ, ಸಂಸದರಾದ ಶ್ರೀ ಜಿ.ಎಸ್. ಬಸವರಾಜು, ಶಾಸಕರಾದ ಶ್ರೀ ಜ್ಯೋತಿಗಣೇಶ್, ಶ್ರೀ ಮಸಾಲೆ ಜಯರಾಂ, ಡಾ. ರಾಜೇಶಗೌಡ, ಶ್ರೀ ಚಿದಾನಂದಗೌಡ, ವೀರಶೈವ ಲಿಂಗಾಯತ ಅಭಿವೃದ್ಧಿ







ನಿಗಮದ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ, ಕರ್ನಾಟಕ ಗಡಿಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ. ಸಿ. ಸೋಮಶೇಖರ್, ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಎಂ. ರುದ್ರೇಶ್, ಬಿಜೆಪಿ ಜಿಲ್ಲಾಧ್ಯಕ್ಷ ಶ್ರೀ ಸುರೇಶಗೌಡ, ಮಾಜಿ ಸಚಿವರಾದ ಶ್ರೀ ಸೊಗಡು ಶಿವಣ್ಣ, ಮಾಜಿ ಶಾಸಕ ಶ್ರೀ ಹುಲಿನಾಯ್ಕರ್, ಜಿಲ್ಲಾಧಿಕಾರಿ ಡಾ. ಕೆ. ರಾಜೇಶಕುಮಾರ್, ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀಮತಿ ಶುಭಕಲ್ಯಾಣಿ, ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಡಾ. ಕೆ. ವಂಸಿಕೃಷ್ಣ ವೊದಲಾದ ಗಣ್ಯರು ಉಪಸ್ಥಿತರಿದ್ದರು. ಕಾರ್ಯಕ್ರಮವನ್ನು ಡಾ. ಶಾಲಿನಿ ಅವರು ನಡೆಸಿಕೊಟ್ಟರು

**ದಾಸೋಹ ವ್ಯವಸ್ಥೆ** : ದಾಸೋಹವೆಂದರೆ ಸಿದ್ಧಗಂಗಾ ಮಠ, ಸಿದ್ಧಗಂಗಾ ಮಠವೆಂದರೆ ದಾಸೋಹ ಎನ್ನುವಷ್ಟರ ಮಟ್ಟಿಗೆ ಜನಜನಿತವಾಗಿದೆ. ಸಿದ್ಧಗಂಗಾ ಮಠದ ದಾಸೋಹ ಪರಂಪರೆಗೆ ತನ್ನದೇ ಆದ ಇತಿಹಾಸವಿದೆ. ಹನ್ನೆರಡನೆ ಶತಮಾನದ ಮಹಾಮನೆಯಲ್ಲಿ ನಡೆಯುತ್ತಿದ್ದ ನಿತ್ಯದಾಸೋಹವನ್ನು ನೆನಪಿಗೆ ತರುವಂತಹ ನಿತ್ಯ ದಾಸೋಹದ ಜೊತೆಗೆ ಶ್ರೀಮಠದಲ್ಲಿ ನಡೆಯುವ ವಿಶೇಷ ಸಮಾರಂಭಗಳಲ್ಲಿ ಲಕ್ಷಾಂತರ ಭಕ್ತರು ದಾಸೋಹ ಸ್ವೀಕರಿಸುತ್ತಿರುವುದು ನೋಡುವವರಿಗೆ ವಿಸ್ಮಯ, ಕೇಳುವವರಿಗೆ ಅದ್ಭುತ ಸಂಗತಿಯಾಗಿದೆ. ಸಾಕ್ಷಾತ್ ಅನ್ನಪೂರ್ಣೇಶ್ವರಿಯೇ ಕೃಪೆ ಮಾಡಿ ನೆಲಸಿರುವುದರಿಂದ ಎಷ್ಟೇ ಜನರು ಬಂದರೂ ದಾಸೋಹ ವ್ಯವಸ್ಥೆಯಲ್ಲಿ ಕಿಂಚಿತ್ತೂ ವ್ಯತ್ಯಯ ಉಂಟಾಗುವುದಿಲ್ಲ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಠಕ್ಕೆ ಬಂದ ಭಕ್ತರು ತೃಪ್ತಿಯಿಂದ ಪ್ರಸಾದ ಸ್ವೀಕರಿಸುವುದನ್ನು ಕಂಡು ಸಂತೋಷಪಡುತ್ತಿದ್ದರು. ಅದಕ್ಕಾಗಿ ದಾಸೋಹ ವ್ಯವಸ್ಥೆ ಸಮರ್ಪಕವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರು. ಪೂಜ್ಯ ಶ್ರೀಗಳವರ ಆಶಯವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸಾಕಾರಗೊಳಿಸುತ್ತಾ ಬರುತ್ತಿದ್ದಾರೆ.

ದಾಸೋಹ ವ್ಯವಸ್ಥೆಯಲ್ಲಿ ತೊಂದರೆಯಾಗ ಬಾರದೆಂದು ಮಠದ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ ಆವರಣದಲ್ಲಿ ಎರಡು ಕಡೆ, ವಜ್ರ ಮಹೋತ್ಸವ ನೆನಪಿನ ಪ್ರಸಾದ ನಿಲಯ, ಸಾದರ ಕೊಪ್ಪಲು, ಹಳೆಮಠ, ಸಿದ್ಧಾರ್ಥ ಅತಿಥಿ ಗೃಹದಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಬೆಳಗಿನ ಉಪಹಾರ, ಮಧ್ಯಾಹ್ನ ಮತ್ತು ರಾತ್ರಿ ಊಟದ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡಲಾಗಿತ್ತು. ಬೆಳಗಿನ ಉಪಹಾರಕ್ಕೆ ಕಾರಾ ಮತ್ತು ಸಿಹಿ ಪೊಂಗಲ್, ಮಧ್ಯಾಹ್ನ ಹಾಗೂ ರಾತ್ರಿ ಊಟಕ್ಕೆ ಸಿಹಿಬೂಂದಿ, ಮಾಲ್ದಿ, ಪಾಯಾಸ, ಖಾರಾಬೂಂದಿ, ಚಿತ್ರಾನ್ನ, ಪಲ್ಯ, ಕೋಸಂಬರಿ, ಅನ್ನಸಾಂಬಾರು, ಮಜ್ಜಿಗೆ ಸೇರಿದಂತೆ ವ್ಯವಸ್ಥೆ ಮಾಡಲಾಗಿತ್ತು. ಭಕ್ತಾದಿಗಳು, ವಿದ್ಯಾರ್ಥಿಗಳು, ಹಳೆಯ ವಿದ್ಯಾರ್ಥಿಗಳು ಸ್ವಯಂ ಪ್ರೇರಿತರಾಗಿ ದಾಸೋಹ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದರ ಮೂಲಕ ಧನ್ಯತೆಯನ್ನು ಪಡೆದರು. ಐವತ್ತು ಸಾವಿರಕ್ಕೂ ಹೆಚ್ಚು ಜನ ಪ್ರಸಾದವನ್ನು ಸ್ವೀಕರಿಸಿದರು.

**ತುಮಕೂರು ನಗರದ ವಿವಿಧ ಕಡೆ ಪೂಜ್ಯ ಶ್ರೀಗಳವರ ಪುಣ್ಯಸ್ಮರಣೆ** : ತುಮಕೂರಿನ ವಿವಿಧ ಬಡಾವಣೆಗಳಲ್ಲಿ ವಿವಿಧ ಸಂಘ ಸಂಸ್ಥೆಗಳ ವತಿಯಿಂದ ಪೂಜ್ಯ ಶ್ರೀ ಶ್ರೀಗಳವರ ದ್ವಿತೀಯ ಪುಣ್ಯಸ್ಮರಣೆಯನ್ನು ಪೂಜ್ಯ ಶ್ರೀ ಶ್ರೀಗಳವರ ಭಾವಚಿತ್ರಕ್ಕೆ ಪೂಜೆ ಸಲ್ಲಿಸುವುದರ ಮೂಲಕ ಭಕ್ತಿ, ಗೌರವದಿಂದ ಅರ್ಥಪೂರ್ಣವಾಗಿ ಆಚರಿಸಲಾಯಿತು. ನಗರದ ಬಿ.ಎಚ್. ರಸ್ತೆಯ ವಿಘ್ನೇಶ್ವರ ಗೆಳೆಯರ ಬಳಗ, ವಿದ್ಯಾನಗರದ ಹಿತರಕ್ಷಣಾ ಸಮಿತಿ, ವಾಲ್ಮೀಕಿ ನಾಗರಿಕ ಹಿತರಕ್ಷಣಾ ಸಮಿತಿ, ಶಿರಾಗೇಟ ಕನಕವೃತ್ತ, ಆರ್.ಟಿ. ನಗರದಲ್ಲಿರುವ ಸರ್ವೋದಯ ಕಾಲೇಜು, ಶ್ರೀ ಗುರು ಸಿದ್ಧೇಶ್ವರಸ್ವಾಮಿ ಸಹಕಾರ ಸಂಘ, ತುಮಕೂರು ವೀರಶೈವ ಸಹಕಾರ ಬ್ಯಾಂಕ್ ಹಾಗೂ ಮಹಾನಂದಿ ಟ್ರಸ್ಟ್, ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು ಮೊದಲಾದ ಕಡೆಗಳಲ್ಲಿ ಆಚರಿಸಲಾಯಿತು. ಶ್ರೀಮಠದ ದಾಸೋಹ ಪರಂಪರೆಯಂತೆ ದಾಸೋಹ ವ್ಯವಸ್ಥೆಯನ್ನು ಮಾಡಲಾಗಿತ್ತು.

**ವಿವಿಧ ಕಡೆಗಳಲ್ಲಿ** : ಪೂಜ್ಯ ಶ್ರೀಗಳವರ ಪುಣ್ಯಸ್ಮರಣೆ ತುಮಕೂರು ನಗರವಲ್ಲದೆ ಜಿಲ್ಲೆ ಹಾಗೂ ರಾಜ್ಯದ ವಿವಿಧ ಕಡೆಗಳಲ್ಲಿ ಭಕ್ತಿಯಿಂದ ಆಚರಿಸಲಾಯಿತು. ತುಮಕೂರು ತಾಲ್ಲೂಕು ಗೂಳೂರು ಹೋಬಳಿ ಹರಳೂರು ಗ್ರಾಮದಲ್ಲಿ ಪೂಜ್ಯ ಶ್ರೀಗಳವರ ಪುತ್ಥಳಿಗೆ ರುದ್ರಾಭಿಷೇಕ ಮಾಡುವುದರ ಮೂಲಕ ಆಚರಿಸಲಾಯಿತು. ತುಮಕೂರು ತಾಲ್ಲೂಕು ನಂದಿಹಳ್ಳಿಯಲ್ಲಿ ಯುವಕರ ಸಂಘ ಭಾವಚಿತ್ರಕ್ಕೆ ಪೂಜೆ ಸಲ್ಲಿಸಿ, ದಾಸೋಹ ನೀಡುವುದರ ಮೂಲಕ ಆಚರಿಸಿದರು. ಅಲ್ಲದೆ ಶಿರಾ ನಗರದ ಶ್ರೀರಾಮ ದೇವಸ್ಥಾನ, ಚೇಳೂರಿನ ಡಾ. ಶಿವಕುಮಾರಸ್ವಾಮಿ ವೃತ್ತದಲ್ಲಿ ಪೂಜ್ಯ ಶ್ರೀಗಳವರ ಭಾವಚಿತ್ರಕ್ಕೆ ಪೂಜೆ ಸಲ್ಲಿಸಿ ಅನ್ನದಾಸೋಹದ ಮೂಲಕ ಆಚರಿಸಲಾಯಿತು. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಮತಿಘಟ್ಟ ಗ್ರಾಮ, ತಿಪಟೂರಿನ ಎ.ಪಿ.ಎಂ.ಸಿ. ಗಣಪತಿ ದೇವಾಲಯದಲ್ಲಿಯೂ ಪುಣ್ಯಸ್ಮರಣೆ ಮಾಡಲಾಯಿತು.

– ಎಚ್.ಎಸ್. ಸಿದ್ಧಗಂಗಪ್ಪ











ಹರಳೂರಿನಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುತ್ಥಳಿಗೆ ಮಹಾಭಿಷೇಕ ಮಾಡಿ ಪುಣ್ಯಸ್ಮರಣೆಯ ಮಾಡಲಾಯಿತು

## ‘ಸಿದ್ಧಗಂಗಾ’ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ ‘ಸಿದ್ಧಗಂಗಾ’ ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
‘ಸಿದ್ಧಗಂಗಾ’ ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೫೨

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥



ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾಮಹೋತ್ಸವ ಆಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಮಠ, ತುಮಕೂರು - 572104

ಪದ್ಮಭೂಷಣ, ಕರ್ನಾಟಕರತ್ನ, ಶ್ರೀ.ಮ.ನಿ.ಪ್ರಸ್ವ, ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದಿವ್ಯ ಕೃಪಾಶೀರ್ವಾದದೊಂದಿಗೆ

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1942ನೇ ಶಾರ್ವರಿನಾಮ ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ ಸಪ್ತಮಿ | 05-03-2021 | ಶುಕ್ರವಾರ | ರಾತ್ರಿ | ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿ ಉತ್ಸವ ಮತ್ತು ಶೂನ್ಯ ಸಿಂಹಾಸನಾರೋಹಣೋತ್ಸವ |
| ಮಾಘ ಬಹುಳ ಅಷ್ಟಮಿ | 06-03-2021 | ಶನಿವಾರ | ರಾತ್ರಿ | ವೃಷಭ ವಾಹನ ನಂದಿವಾಹನ ಮತ್ತು ಗಜ ವಾಹನ |
| ಮಾಘ ಬಹುಳ ನವಮಿ | 07-03-2021 | ಭಾನುವಾರ | " | ಹುಲಿವಾಹನ ಮತ್ತು ಸಿಂಹವಾಹನ |
| ಮಾಘ ಬಹುಳ ದಶಮಿ | 08-03-2021 | ಸೋಮವಾರ | " | ಹುತ್ತದವಾಹನ ಮತ್ತು ಶೇಷವಾಹನ |
| ಮಾಘ ಬಹುಳ ಏಕಾದಶಿ | 09-03-2021 | ಮಂಗಳವಾರ | " | ಅಶ್ವವಾಹನ ಮತ್ತು ನವಿಲು ವಾಹನ |
| ಮಾಘ ಬಹುಳ ದ್ವಾದಶಿ | 10-03-2021 | ಬುಧವಾರ | " | ರಾವಣವಾಹನ, ಬಿಲ್ವವೃಕ್ಷವಾಹನ ಮತ್ತು ನವರಂಗಪಾಲಕಿ ಉತ್ಸವ |
| ಮಾಘ ಬಹುಳ ತ್ರಯೋದಶಿ | 11-03-2021 | ಗುರುವಾರ | " | ಮಹಾಶಿವರಾತ್ರಿ ಪೂಜಾದಿಗಳು, ಬೆಳ್ಳಿರಥೋತ್ಸವ ಮುತ್ತಿನ ಪಾಲಕಿ ಉತ್ಸವ |
| ಮಾಘ ಬಹುಳ ಚತುರ್ದಶಿ | 12-03-2021 | ಶುಕ್ರವಾರ | | ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮಹಾ ರಥೋತ್ಸವ ರುದ್ರಾಕ್ಷಿ ಮಂಟಪೋತ್ಸವ |
| ಮಾಘ ಬಹುಳ ಅಮಾವಾಸ್ಯೆ॰ | 13-03-2021 | ಶನಿವಾರ | ರಾತ್ರಿ | 11ಗಂಟೆಗೆ ಬೆಳ್ಳಿಪಾಲಕಿ ಉತ್ಸವ |
| ಫಾಲ್ಗುಣ ಶುದ್ಧ ಪಾಡ್ಯ | 14-03-2021 | ಭಾನುವಾರ | " | ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ |

ದಿನಾಂಕ 05-03-2021 ಶುಕ್ರವಾರದಿಂದ ಎತ್ತುಗಳ ಪರಿಷೆ, ದನಗಳ ಪ್ರದರ್ಶನ ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆ ಇರುತ್ತದೆ. ಪ್ರತಿದಿನ ಸಂಜೆ ಸಾಮೂಹಿಕ ಪ್ರಾರ್ಥನೆ ನಂತರ ವಿಶೇಷ ಧಾರ್ಮಿಕ ಉಪನ್ಯಾಸಗಳು, ದಿನಾಂಕ 01-03-2021 ರಿಂದ ಪ್ರಾರಂಭವಾಗುವ "ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ" ದಲ್ಲಿ ಪ್ರತಿದಿನವೂ ಸಂಜೆ "ಸಾಂಸ್ಕೃತಿಕ ಚಟುವಟಿಕೆಗಳೂ" ನಡೆಯುತ್ತವೆ. ಸರ್ವರೂ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಲಿಂಗಸ್ವಾಮಿಗಳು
ಅಧ್ಯಕ್ಷರು, ಶ್ರೀ ಸಿದ್ಧಗಂಗಾಮಠ.



ನುಡಿನಮನ

# ಮನುಕುಲದ ಮಾಣಿಕ್ಯ : ಶ್ರೀ ಸಿದ್ಧಗಂಗಾ ಶ್ರೀಗಳು

– ಡಾ. ದೊಡ್ಡರಂಗೇಗೌಡ *

**ಆಗ** ನಾನು ಪಿಯುಸಿ ವಿದ್ಯಾರ್ಥಿ; ನಮ್ಮ ಉಚಿತ ವಿದ್ಯಾರ್ಥಿ ನಿಲಯಕ್ಕೆ ಸಿದ್ಧಗಂಗಾ ಮಠದ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರನ್ನು ವಿದ್ಯಾರ್ಥಿ ಸಂಘದ ಉದ್ಘಾಟನಾ ಸಮಾರಂಭಕ್ಕೆ ವಿಶೇಷ ಅತಿಥಿಯನ್ನಾಗಿ ಕರೆಸಿದ್ದೆವು. ಇಡೀ ಸಿದ್ಧರಾಮಣ್ಣ ಉಚಿತ ವಿದ್ಯಾರ್ಥಿ ನಿಲಯದಲ್ಲಿ ಏನೋ ಸಡಗರ; ಏನೋ ಸಂಭ್ರಮ. ಎಂಥದೋ ಒಂದು ಬಗೆ ಉತ್ಸಾಹ. ಶ್ರೀ ಗುರುಗಳನ್ನು ನೋಡುವ ಕಾತರ; ಅವರ ಆಶೀರ್ವಾದ ಪಡೆಯಬೇಕೆಂಬ ಅಭೀಕ್ಷೆ.

ಆ ಭಾನುವಾರ ನನಗಂತೂ ಒಂದು ಅಪೂರ್ವ ಅನುಭವ. ಸ್ವಾಮೀಜಿ ವೇಳೆಗೆ ಸರಿಯಾಗಿ ಬಂದರು; ದೀಪ ಬೆಳಗಿದರು; ಸಂಸ್ಕೃತ ಶ್ಲೋಕ ಹೇಳಿದರು, ಆನಂತರ ಸಭೆಯ ಸಾಂಪ್ರದಾಯಿಕ ಕಲಾಪ. 'ಲೋಕ ಸೇವಾನಿರತ ಶ್ರೀ ಸಿದ್ಧರಾಮಣ್ಣ ಅವರು ಹೆಚ್ಚು ಮೌನಿ. ಆದ್ದರಿಂದ ಒಂದೆರಡು ಪ್ರೀತಿಯ ಮಾತಿನಲ್ಲಿ ಸ್ವಾಮೀಜಿ ಅವರನ್ನೂ, ಸಭಿಕರನ್ನೂ ಸ್ವಾಗತಿಸಿದರು. ಹಾರ ಹಾಕಿದರು. ಸ್ವಾಮೀಜಿ ನಿಂತೇ ಹಾರವನ್ನು ಕೈಯಲ್ಲಿ ತೆಗೆದುಕೊಂಡರು. ನಿಂತೇ ಮಾತನಾಡಲು ಆರಂಭಿಸಿದರು. ಸ್ವಾಮೀಜಿ ಅವರ ನಿಲುವು ಎಲ್ಲರ ಗಮನ ಸೆಳೆಯುವಂತೆ ಗಂಭೀರ, ಮಾತು ಸ್ಪಷ್ಟ, ನೇರ ! ಸಂಸ್ಕೃತ, ಕನ್ನಡ ಇಂಗ್ಲಿಷಿನಲ್ಲಿ ಉದ್ದಾಮ ಪಂಡಿತರು, ಆಡುವ ಪ್ರತಿ ಮಾತೂ ಸ್ಫುಟ, ನಿರ್ದಿಷ್ಟ. ಮಧ್ಯೆ ಮಧ್ಯೆ ವಚನಕಾರರ ಉಲ್ಲೇಖ. ವಚನಗಳನ್ನು ಹೇಳುತ್ತಾ ನಿಧಾನವಾಗಿ ದೃಢವಾಗಿ ವ್ಯಾಖ್ಯಾನಿಸುತ್ತ ವಾಗ್ಝರಿ ಹರಿಸಿದರು.

**'ನಹಿ ಜ್ಞಾನೇನ ಸದೃಶಂ'** ಎಂದು ಹೇಳಿದರು, ನಾನು ನೆನಪಿಟ್ಟುಕೊಂಡೆ. Knowledge is Power ಎಂದು ಪ್ರತಿಪಾದಿಸಿದರು. ಶಿಕ್ಷಣದ ಮಹತ್ವವನ್ನೂ ತಿಳಿಸಿಕೊಟ್ಟರು. ಸ್ವಾಮೀ ವಿವೇಕಾನಂದರನ್ನು ಉಲ್ಲೇಖಿಸಿದರು. ನನಗಂತೂ ಶ್ರೀ ಶಿವಕುಮಾರ ಸ್ವಾಮೀಜಿ ಅವರೇ ಸ್ವಾಮಿ ವಿವೇಕಾನಂದರಂತೆ ಕಂಡರು.

ಅಂದಿನಿಂದ ಇಂದಿನ ತನಕವೂ ಅದೇ ಭಾವನೆ; ಮನೋಜ್ಞವಾಗಿರುತ್ತದೆ. ಅವರ ಸ್ವೋಪಜ್ಞ ಚಿಂತನೆ ತಾರ್ಕಿಕವಾಗಿರುತ್ತದೆ. ಮಾತು, ವೈಚಾರಿಕತೆ ಕೂಡ ಅವರಲ್ಲಿ ಪರಿಪಕ್ವವಾಗಿರುತ್ತದೆ.

ಶ್ರೀ ಸಿದ್ಧಗಂಗಾ ಶ್ರೀಗಳು ಸದಾ ಅಧ್ಯಯನ ನಿರತರು. ಅವರ ಪಾಂಡಿತ್ಯ ಪೂರ್ಣವಾದ ಮಾತುಗಳನ್ನು ಕೇಳಿಸಿಕೊಂಡರೆ ಅವರ ವಾಙ್ಮಯದ ತಿಳಿವಳಿಕೆ ಗೊತ್ತಾಗುತ್ತದೆ. ಜ್ಞಾನಿಗಳು ಎಂಬುದು ನಿಶ್ಚಯವಾಗುತ್ತದೆ. ಅವರ ಮೊದಲ ಭಾಷಣಕ್ಕೆ ನಾನು ಮರುಳಾದೆ. ಅದು ಬರೀ ಭಾಷಣ ಅಲ್ಲ, ಜ್ಞಾನಪೂರ್ಣ ಉಪನ್ಯಾಸ. ೧೯೬೦ ರಿಂದಲೂ ನಾನು ಅವರ ಭಕ್ತ. ಅಕ್ಕರೆಯ ಶಿಷ್ಯ. ಅವರ ಬಳಿ ವಾತ್ಸಲ್ಯದ ವಾರಿಧಿ ಇದೆ. ತಾಯ್ತನದ ಪ್ರತೀಕ ನಮ್ಮ ಶ್ರೀ ಸಿದ್ಧಗಂಗಾ ಗುರುಗಳು.

ಅಂದಿನಿಂದ ಇಂದಿನ ತನಕ ಅದೆಷ್ಟೋ ಉಪನ್ಯಾಸಗಳನ್ನು ಕೇಳಿದ್ದೇನೆ. ಅವರನ್ನು ಅಗಣಿತ ಸಾರಿ ಮುಖತಃ ಭೇಟಿ ಮಾಡಿ ಆ ದಿವ್ಯಚರಣ ಕಮಲಗಳಿಗೆ ನಮಿಸಿ ಆಶೀರ್ವಾದಗಳನ್ನು ಪಡೆದುಕೊಂಡಿದ್ದೇನೆ. ಅವರ ಬಗೆಗೆ

* ೧೪೦, 'ಶ್ರೀ ಸನ್ನಿಧಿ' ೩ನೇ ಮುಖ್ಯರಸ್ತೆ, ಕತ್ತರಿಗುಪ್ಪ ಪೂರ್ವ, ಬೆಂಗಳೂರು-೫೬೦ ೦೮೫





ಹಿಮಾಲಯದೆತ್ತರದ ಗೌರವಭಾವ. ಅಂಬರದಷ್ಟು ವಿಶಾಲ ಅವರ ಮಾನವೀಯ ಹೃದಯ. ಅವರಲ್ಲಿ ಒಂದು ಅಕ್ಕರೆಯ ಗಂಗಾನದಿಯೇ ಇದೆ !

ನಾನು ನನ್ನ ನಾಲ್ಕೈದು ಗೆಳೆಯರು ಪ್ರತಿ ಭಾನುವಾರ ಒಂದು ನಾಲ್ಕು ವರ್ಷಗಳ ಕಾಲ ನಿರಂತರವಾಗಿ ತುಮಕೂರಿನಿಂದ ಸಿದ್ಧಗಂಗೆಗೆ ಹೋಗಿ ಅವರನ್ನು ಕಂಡು ನಮಸ್ಕರಿಸಿ, ಉಪದೇಶ ಕೇಳಿ ಅವರು ಹೇಳಿದಂತೆ ದಾಸೋಹ ಶಾಲೆಗೆ ಹೋಗಿ ಪ್ರಸಾದ ಮಾಡಿಕೊಂಡು ಶ್ರೀ ಉದ್ಧಾನೇಶ್ವರ ಸಾನ್ನಿಧ್ಯವನ್ನು ಪಡೆದು ಪಾವನರಾಗಿದ್ದೇವೆ.

ಶ್ರೀ ಸಿದ್ಧಗಂಗೆಯ ಪ್ರಶಾಂತ ಸಂತ ಶ್ರೀ ಶಿವಕುಮಾರ ಸ್ವಾಮೀಜಿ ಬಗ್ಗೆ ಅಪಾರ ಹೆಮ್ಮೆ. ಅನಂತ ಪ್ರೀತಿ, ಅದ್ವಿತೀಯ ಅವರ ಜ್ಞಾನದ ಕೊಡುಗೆ. ಶಿಕ್ಷಣ ಕ್ಷೇತ್ರಕ್ಕೆ ಅಪಾರ ಅವರ ಕಾಣಿಕೆ. ಹಸಿದವರಿಗೆ ಅನ್ನ ನೀಡುವ ಅವರ ದಾಸೋಹದ ಕಾಯಕ ಅಭಿನಂದನೀಯ, ಅನುಸರಣೀಯ. ಅತ್ಯಂತ ಆದರ್ಶ ಗುರುಗಳು ಅವರು. ಅವರಿಗೆ ತಲೆಬಾಗಿದವರಿಲ್ಲ. ಅವರ ಮುಂದೆ ಬೀಗಿದವರಿಲ್ಲ. ನಾನಂತೂ ಅವರನ್ನು ಪ್ರತಿನಿತ್ಯ ನೆನೆಯುತ್ತೇನೆ. ಅವರ ಭಾವಚಿತ್ರಕ್ಕೆ ವಂದಿಸುತ್ತೇನೆ. ಕೋಟಿ ಕೋಟಿ ಅವರ ಶಿಷ್ಯರಲ್ಲಿ ನಾನೂ ಒಬ್ಬ ಎಂದು ಹೇಳಿಕೊಳ್ಳಲು ಅಭಿಮಾನ ಎನಿಸುತ್ತದೆ, ಹೆಮ್ಮೆ ಅನ್ನಿಸುತ್ತದೆ. ಅವರು ಚಿರಂಜೀವಿಯಾಗಿ ಬಾಳಿ ಭಕ್ತರ ಹರಸಬೇಕು ಎಂಬುದು ನನ್ನ ಮಹತ್ವಾಕಾಂಕ್ಷೆ !

## ಶ್ರೀವಾಣಿ

ಮನುಷ್ಯ ಮನುಷ್ಯನಾಗಿ ಬದುಕುವುದನ್ನು ಮರೆತಿದ್ದರಿಂದಲೇ ಇಂದು ಜಗತ್ತಿನಲ್ಲಿ ಹಲವಾರು ಸಮಸ್ಯೆಗಳು ತಲೆ ಎತ್ತಿವೆ. ಅವುಗಳಿಂದ ನಿವಾರಿತನಾಗಬೇಕಾದರೆ ಮನುಷ್ಯ ತನ್ನ ನೀತಿ ಸಂಹಿತೆ, ಆಚಾರ ಸಂಹಿತೆ, ಧರ್ಮಸಂಹಿತೆಯನ್ನು ತಿಳಿದು ಬಾಳಬೇಕಾಗಿದೆ.

* * *

ಇಂದು ಎತ್ತೆತ್ತ ನೋಡಿದರೂ ಕೂಳುಬಾಕರೇ ವಿಜೃಂಭಿಸಿದ್ದಾರೆ. ಪ್ರಸಾದ ಜೀವಿಗಳು ವಿರಳವಾಗುತ್ತಿದ್ದಾರೆ. ದುಡಿಯದೆ ತಿನ್ನುವುದು ಕೂಳು; ಶ್ರಮ ಜೀವನ ನಡೆಸಿ ಊಟ ಮಾಡುವುದು ಪ್ರಸಾದ.



## ಅಭಿನವ ಬಸವೇಶ್ವರರು

ಗುರುವೇ ನಿಮ್ಮಯ ಜ್ಞಾನ-
ಕಿರಣಗಳ ಪ್ರಭೆಯಲಿ ನಾ ಮಿಂದೆ
ನೀವು ಕಾಯುವಿರಿ ದಿನದಿನ-
ಕ್ಷಣ ಕ್ಷಣ ನಮ್ಮ ಬೆನ್ನ ಹಿಂದೆ !
ನಿಮ್ಮ ಪ್ರೀತಿಯದು ಹುಣ್ಣಿಮೆಯಂತೆ
ಕಾಂತಿ ಪೂರ್ಣ ಶಾಂತಿ !
ನಿಮ್ಮ ಬೋಧನೆಯ ನಲ್ಮೆ ತಾಯಿಯಂತೆ
ಬದುಕಿಗೆ ಚಿರ ಪ್ರಣತಿ !

ಗುರುವೆ ನೀವಿತ್ತ ಪ್ರಸಾದ ನಮಗೆ
ದಿವ್ಯಚೈತನ್ಯದ ವಾತ್ಸಲ್ಯ ಕೊಡುಗೆ
ಗುರುವೆ ನೀವಿರಲು ಬೆಳಕದು ನಮಗೆ
ತಮಂದ ಕಳೆವ ರವಿರಶ್ಮಿ ದೇಣಿಗೆ !

ಗುರುವೇ ನಿಮ್ಮಯ ಪಾಂಡಿತ್ಯ ಕಂಡು
ಪುಳಕಗೊಂಡೆವು ನಾವು ಬುಗ್ಗೆಯ ಹಾಗೆ
ಗುರುವೇ ನಿಮ್ಮ ಕರುಣೆ ಕೋಟಿ ಕೋಟಿ
ಜನಮನಕೆ

ಜ್ಯೋತಿರ್ಧಾರಿ ನೀವಾಗಿ ನಿಂತಿರಿ ಬದಿಗೆ
ಶರಣು ಶರಣೆಂಬೆವು ಪ್ರಾತಃಸ್ಮರಣೀಯರಿಗೆ
ಅನ್ನ ಅಕ್ಷರ ಆರೋಗ್ಯ ನೀಡಿದ ಶ್ರೀ ಗುರುವಿದ್ಯೆ

ತಂಪು ಹೊತ್ತಿನಲ್ಲಿ ನಾವು
ಕುಂತಕಡೆ ನೆನೆವೆವು
ಆಶೀರ್ವದಿಸಿ ಮನಸಾರೆ
ಶಿಷ್ಯಕೋಟಿ ಬಾಳಲೆಂದು !

ನಮ್ಮೆಲ್ಲರ ಪಾಲಿಗೆಂದೂ
ನೀವೇ ಬಸವೇಶ್ವರರು ಮಾದರಿ ಬದುಕಿಗೆ !

– ಡಾ. ದೊಡ್ಡರಂಗೇಗೌಡ





ನುಡಿನಮನ

# ಕೋಟಿ ಕೋಟಿ ಜನತೆಯ ಹೃದಯಗೆದ್ದ ಕಾಯಕ ಯೋಗಿ

– ಡಾ. ವೈ.ಎಸ್. ವೀರಭದ್ರಪ್ಪ *

ದೇಶ-ವಿದೇಶಗಳಲ್ಲಿಯೂ ನಡೆದಾಡುವ ದೇವರೆಂದೇ ಪ್ರಸಿದ್ಧಿ ಪಡೆದ ತ್ರಿವಿಧ ದಾಸೋಹಿಗಳಾದ ಶ್ರೀ ಸಿದ್ಧಗಂಗಾ ಮಠದ ಕಾಯಕ ಯೋಗಿ ಕರ್ಮಯೋಗಿ, ಜ್ಞಾನಯೋಗಿ, ಧ್ಯಾನಯೋಗಿ, ಧರ್ಮಯೋಗಿ, ದಾನಯೋಗಿ, ಮಂತ್ರಯೋಗಿಯಾಗಿ ಶ್ರೀ ಜಗಜ್ಯೋತಿ ಬಸವೇಶ್ವರರ ಆದರ್ಶಗಳ, ಆಶಯದ ತತ್ತ್ವಗಳನ್ನು ಚಾಚೂ ತಪ್ಪದೆ ತಮ್ಮ ಜೀವಿತಾವಧಿಯಲ್ಲಿ ಅಳವಡಿಸಿಕೊಂಡು ಅನೂಚೂನವಾಗಿ ಆಚರಿಸುತ್ತಾ ಬಂದಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಕೋಟಿ ಕೋಟಿ ಜನತೆಯ ಹೃದಯ ಸಿಂಹಾಸನ ಗೆದ್ದಿರುವಾಗ ಸರ್ಕಾರ ನೀಡುವ "ಭಾರತರತ್ನ" ಪ್ರಶಸ್ತಿ ಇವರಿಗೆ ಅನಿವಾರ್ಯವೇ? ಇದಾವುದರ ಪರಿವೆಗೂ ತಲೆ ಕೆಡಿಸಿಕೊಳ್ಳದೆ ಪೂಜ್ಯರು ತಾವಾಯಿತು, ತಮ್ಮ ಕಾಯಕವಾಯ್ತು ಎಂದು ಅದರಲ್ಲೇ ಮಗ್ನರಾಗಿದ್ದವರು.

**ಪ್ರೀತಿಯಿಂದ ಒಂದು ಗುಲಾಬಿ ಹೂವು ನೀಡಬಾರದೆ :** ಆದರೂ ಸಮಾಜ ಸೇವೆಗಾಗಿಯೇ ತಮ್ಮ ಜೀವಮಾನವನ್ನೇ ಮುಡುಪಾಗಿಟ್ಟು ಜೀವ ಸವೆಸಿದ ಗುರುವಿಗೆ ಗುರುಕಾಣಿಕೆ ನೀಡುವುದು ಸೇವೆ ಪಡೆದ ಸಮಾಜದ ಕರ್ತವ್ಯ. ಅದರಂತೆ ಅವರಿಗೆ ಭಾರತರತ್ನ ಪ್ರಶಸ್ತಿ ಬದಲಿಗೆ "ವಿಶ್ವರತ್ನ" ಶ್ರೇಷ್ಠ ಪ್ರಶಸ್ತಿಯನ್ನು ಈಗಾಗಲೇ ನೀಡಬೇಕಾಗಿತ್ತು. ಆದರೂ ಬಾಧಕವಿಲ್ಲಾ ಅಮೇರಿಕಾದ ಬಿಡುವಿಲ್ಲದ ಆಗರ್ಭ ಶ್ರೀಮಂತ ಉದ್ಯಮಿಯೊಬ್ಬರ ಪತ್ನಿ ತನ್ನ ಪತಿಗೆ ಲೋಕಭಿರಾಮವಾಗಿ ಒಂದು ಪ್ರಶ್ನೆ ಹಾಕಿ, ನಾನು ಸತ್ತಾಗ ನನ್ನ ಅಂತ್ಯಕ್ರಿಯೆ ಹೇಗೆ ನೆರವೇರಿಸುತ್ತೀರಾ ಎಂದು ಕೇಳಿದ್ದಕ್ಕೆ ನೀನು ಸತ್ತಾಗ ನಿನ್ನ ಶವವನ್ನು ಬಂಗಾರದ ಶವಪೆಟ್ಟಿಗೆಯಲ್ಲಿಟ್ಟು, ಫಲಪುಷ್ಪಗಳಿಂದ ಸಿಂಗರಿಸಿ, ಡಂಗೂರ ವಾದ್ಯಗಳಿಂದ ರಾಜಬೀದಿಯಲ್ಲಿ ಮೆರವಣಿಗೆ ನಡೆಸಿ, ಲಕ್ಷೋಪಲಕ್ಷ ಜನತೆಗೆ ಊಟೋಪಚಾರ ಮಾಡಿಸಿ, ವಜ್ರಖಚಿತ ಸಮಾಧಿಯಲ್ಲಿ ಮಲಗಿಸಿ, ರತ್ನಗಂಬಳಿ ಹೊದಿಸಿ, ಅಂತಿಮದಲ್ಲಿ ಚರಮಗೀತೆ ಹಾಡಿ ವಿದಾಯ ಹೇಳುತ್ತೇನೆಂದು ಗಂಡನಿಂದ ಬಂದ ಉತ್ತರ ಕೇಳಿ ದುಃಖದಿಂದ ನೊಂದು ನುಡಿದು, ನೀವು ಮಾಡುವ ಆಡಂಬರದ ಅಂತ್ಯಕ್ರಿಯೆಯ ಆಚರಣೆ ನೋಡಲು ಸತ್ತು ಮಲಗಿದ್ದ ನನಗೆ ಹೇಗೆ ಸಾಧ್ಯ. ಆದ್ದರಿಂದ ನಾನು ಬದುಕಿದ್ದಾಗಲೇ ಪ್ರೀತಿಯಿಂದ ಒಂದು ಗುಲಾಬಿ ಹೂ ನೀಡಬಾರದೆ ಎಂದಳಂತೆ. ಅದೇ ರೀತಿ ಪೂಜ್ಯರ ಜೀವಿತದ ಕಾಲದಲ್ಲಿಯೇ "ಭಾರತರತ್ನ" ಪ್ರಶಸ್ತಿ ನೀಡಿದ್ದರೆ ಅದಕ್ಕೆ ಅತ್ಯಂತ ಮಹತ್ವ ದೊರೆಯುತ್ತಿತ್ತು.

**ಪರಮಪೂಜ್ಯರ ಬದುಕು ಪಾರದರ್ಶಕ :** ಪೂಜ್ಯ ಶ್ರೀಗಳ ಒಂದೊಂದು ನಡೆಗಳು, ಒಂದೊಂದು ನುಡಿಮುತ್ತುಗಳು ಹೆಜ್ಜೇನು ಸವಿದಂತೆ, ಹೂವಿನೊಳಗಿನ ಕಂಪು ಹೊರಸೂಸಿದಂತೆ, ಅಮೃತದೊಳಗಿನ ರುಚಿ ನಾಲಿಗೆಯ ತುದಿಯಲ್ಲರಳಿದಂತೆ, ಅವರ ಅಂತರಂಗ, ಬಹಿರಂಗದಲ್ಲಿ ಯಾವುದೇ ಆಡಂಬರದ ಡಂಬಾಚಾರಗಳಿಲ್ಲ, ಪಾರದರ್ಶಕವಾದ ಅವರ ಬದುಕು ಎಂದೆಂದಿಗೂ ಅಮರ. ಅವರ ಪರಿಪಕ್ವತೆ ಉಗಮವಾದುದು ನಡೆಯಲ್ಲಿ, ನುಡಿಯಲ್ಲಿ, ನಂಬಿಕೆಯಲ್ಲಿ ನೆಚ್ಚಿಕೆಯಲ್ಲಿ ಕಂಡುಬರುವ ಈ ಏಕಸೂತ್ರತೆಯ ತತ್ತ್ವದಿಂದ ಅವರು ಗಳಿಸಿದ ಕೀರ್ತಿ, ಘನತೆ, ಗೌರವಾದರಗಳು ಗೌರಿಶಿಖರದ ಉತ್ತುಂಗ ತುದಿಗೆ ತಲುಪಿದ್ದು, ಇದನ್ನು ಅಗೆದಷ್ಟು, ಬಗೆದಷ್ಟು ಮತ್ತಷ್ಟು ಮೊಗದಷ್ಟು ಮುಗಿಲೆತ್ತರದ ಅನರ್ಘ್ಯ ರತ್ನವಾಗಿ ಬೆಳೆದು ನಿಂತು ಪ್ರಕಾಶಿಸಲು ಸಾಧ್ಯವಾಗಿದೆ ಎಂದರೆ ತಪ್ಪಾಗಲಾರದು.

**ಎಂತಹ ನಡೆದಾಡುವ ದೇವರಯ್ಯ ನೀವು?** ನೀವು ಉಟ್ಟ ಬಟ್ಟೆ ಪೀತಾಂಬರವಿಲ್ಲ, ನಿಮ್ಮ ಶಿರದಲ್ಲಿ ವಜ್ರದ ಕಿರೀಟವಿಲ್ಲ, ಕೊರಳಲ್ಲಿ ಪಚ್ಚೆಯ ಪದಕವಿಲ್ಲ. ಕೈಯಲ್ಲಿ ತ್ರಿಶೂಲ ಖಡ್ಗಗಳಿಲ್ಲ, ಬಿಲ್ಲು ಬಾಣಗಳಿಲ್ಲ, ಆದರೂ ಸುಕ್ಷೇತ್ರ ಸಿದ್ಧಗಂಗಾ ಬೆಟ್ಟದಡಿ ಬಟಾಬಯಲಲ್ಲಿ ಗಟ್ಟಿಗೊಂಡಂತೆ ಮೌನದೊಳಗಿರುವ ಪುಟಕಿಟ್ಟ ರತ್ನದಂತೆ ಕಂಗೊಳಿಸಿ ಬೆಳಕು ಚೆಲ್ಲಿದ ನಿಮ್ಮ ದರ್ಶನಕ್ಕೆ ಪ್ರತಿದಿನ ಸಹಸ್ರ ಸಹಸ್ರ ಭಕ್ತಾದಿಗಳ ಭಾಗ್ಯನಿಧಿಯಾಗಿ ಅವರ ಕಷ್ಟ ಸುಖಗಳಿಗೆ ಸ್ಪಂದಿಸುತ್ತಾ ನಾಡಿನಾದ್ಯಂತ ವಿದ್ಯೆ ಆರಸಿ ಬಂದ

* ನಗರಸಭಾ ಮಾಜಿ ಸದಸ್ಯ, ಹಾಸನ-೫೭೩೨೦೧







ಹತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಲ್ಲಿ ಯಾವುದೇ ಜಾತಿ, ವರ್ಣ, ವರ್ಗಭೇದವೆಣಿಸದೆ ಬಡವ ಬಲ್ಲಿದ ಎಂದು ವಿಂಗಡಿಸದೆ ಆಹಾರ, ಆಶ್ರಯ, ಅಕ್ಷರಜ್ಞಾನ ಉಚಿತ ದಾಸೋಹ ನೀಡುವುದರ ಜೊತೆ ಜೊತೆಯಲ್ಲಿಯೇ ಘನತೆವೆತ್ತ ಸನ್ನಡತೆ, ಸದ್ಭಾವನೆ, ಸಹನೆ, ಸಂಯಮ, ಸಹಕಾರ, ಸಹಬಾಳ್ವೆಯಿಂದ ಸ್ವಯಂ ಜೀವನ ನಡೆಸುವ ಕಲೆ ಕಲಿಸಿದ ಕಲೆಗಾರ, ವಿಭೂತಿ ಪುರುಷ, ಮಹಾಗುರು ಶ್ರೀ ಸಿದ್ಧಗಂಗಾ ಶ್ರೀಗಳ ಕಾರ್ಯತತ್ಪರತೆ ಗಮನಿಸಿದ ದೇಶ-ವಿದೇಶದ ಇಡೀ ಜನತೆ ನಿಬ್ಬೆರಗಾಗಿ ನಿಂತು ನೋಡುವಂತಾಗಿದ್ದು ನಮ್ಮೆಲ್ಲರ ಸೌಭಾಗ್ಯವಲ್ಲದೆ ಮತ್ತೇನು. ಹಾಗೂ ಇಡೀ ಪ್ರಪಂಚದಲ್ಲಿ ಇಂತಹಾ ಮಹತ್‌ಕಾರ್ಯ ಮಾಡಿದವರು ಬೇರೆ ಯಾರಿದ್ದಾರೆ!

**ಆಳೆತ್ತರದ ಏಕಶಿಲಾ ಮೂರ್ತಿ ನೀವು :** ಒಬ್ಬ ವ್ಯಕ್ತಿ ತಾನು ನಿಂತ ನಿಲುವಿನಲ್ಲೇ ಬೆನ್ನು ಬಾಗಿಸದೆ ತನ್ನ ನೀಳ ತೋಳುಗಳ ಕೈ ಹಸ್ತದಿಂದ ತನ್ನ ಎರಡೂ ಕಾಲಿನ ಮಂಡಿಗಳನ್ನು ತಾಕಿಸುತ್ತಾನೋ ಅಂತಹ ವ್ಯಕ್ತಿ ಮಹಾತ್ಮನೆನಸಿಕೊಳ್ಳುತ್ತಾನೆ ಎಂಬ ಪ್ರತೀತಿಯ ಮಾತೊಂದಿದೆ. ಅದರಂತೆ ಪ್ರಪಂಚದ ಅನೇಕ ವಿರಳ ವ್ಯಕ್ತಿಗಳಲ್ಲಿ ಮಹಾತ್ಮರು ಎನಿಸಿಕೊಂಡವರ ಸಾಲಿನಲ್ಲಿ ಗಾಂಧೀಜಿ ಮತ್ತು ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರು ಈ ತೇಜಸ್ಸು ಉಳ್ಳವರಾಗಿದ್ದರಂತೆ. ಸಿದ್ಧಗಂಗಾ ಶ್ರೀಗಳ ಪೂರ್ವಾಶ್ರಮ ಮಾಗಡಿ ತಾಲ್ಲೂಕಿನ ವೀರಾಪುರ ಗ್ರಾಮ. ಇಲ್ಲಿ ಸಾಮಾನ್ಯ ಬಡರೈತ ಕುಟುಂಬದಲ್ಲಿ ಹೊನ್ನಪ್ಪಗೌಡ ಮತ್ತು ಶ್ರೀಮತಿ ಗಂಗಮ್ಮನವರ ಗರ್ಭಾಂಬುಧಿಯಲ್ಲಿ ಜನಿಸಿದ ಹದಿಮೂರು ಮಕ್ಕಳಲ್ಲಿ ಹದಿಮೂರನೇ ಕೊನೆಯ ಸಪುತ್ರನಾಗಿ ೧.೪.೧೯೦೮ ರಲ್ಲಿ ಜನಿಸಿದ ಇವರ ಮೂಲನಾಮ ಶಿವಣ್ಣ. ಬಾಲ್ಯದಲ್ಲಿ ಬಡತನವಿದ್ದರೂ ಶಿಕ್ಷಣ ಕಲಿಯುವ ಮಹಾತ್ವಾಕಾಂಕ್ಷೆ ಹೊತ್ತ ಶಿವಣ್ಣ ತನ್ನ ಹುಟ್ಟೂರಿನಲ್ಲಿ ಹೆಚ್ಚು ಕಲಿಯುವ ಸೌಲಭ್ಯವಿಲ್ಲದ ಕಾರಣ ನಾಗವಲ್ಲಿಯಲ್ಲಿದ್ದ ಅಕ್ಕನ ಮನೆಗೆ ಬಂದು ನೆಲಸಿದರು. ಅಲ್ಲಿಯೇ ಮಾಧ್ಯಮಿಕ ಶಾಲೆಯಲ್ಲಿ ಕಲಿತ ಶಿವಣ್ಣ ಪ್ರೌಢಶಾಲೆಗೆ ತುಮಕೂರಿಗೆ ಬಂದು ಅಲ್ಲೇ ಒಂದು ಕೊಠಡಿ ಬಾಡಿಗೆಗೆ ಹಿಡಿದು ವಿದ್ಯಾಭ್ಯಾಸ ಮುಂದುವರಿಸಿದ್ದರು. ಆದರೆ ದುರಾದೃಷ್ಟವಶಾತ್ ಇವರಿದ್ದ ಬಡಾವಣೆಯ ಸುತ್ತಮುತ್ತ ಪ್ಲೇಗ್‌ರೋಗ ಕಾಣಿಸಿಕೊಂಡಿತು. ಈ ವೇಳೆ ಶಿವಣ್ಣ ಶ್ರೀಮಠಕ್ಕೆ ಬಂದು ಆಶ್ರಯ ನೀಡುವಂತೆ ಕೇಳಿಕೊಂಡರು, ಆಗ ಮಠದಲ್ಲಿ ಆರ್ಥಿಕ ಮುಗ್ಗಟ್ಟು ಬಹಳ ಇದ್ದುದರಿಂದ ಅಂದು ಪೀಠಾಧ್ಯಕ್ಷರಾಗಿದ್ದ ಪೂಜ್ಯ ಉದ್ದಾನ ಶಿವಯೋಗಿ ಹುಡುಗ ಶಿವಣ್ಣನಿಗೆ ಮಠದಲ್ಲಿ ಆಶ್ರಯ ನೀಡಲು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರಂತೆ.

**ಛಲಬಿಡದ ತ್ರಿವಿಕ್ರಮ ಶಿವಣ್ಣ :** ಶ್ರೀ ಮಠದಲ್ಲಿ ಆಶ್ರಯ ಸಿಗದಿದ್ದರೂ ಮಠದ ಭಾವನಾತ್ಮಕ ಸಂಬಂಧ ಬೆಳೆಸಿಕೊಂಡಿದ್ದ ಶಿವಣ್ಣ ಆಗಾಗ ಮಠಕ್ಕೆ ಭೇಟಿ ನೀಡುತ್ತಿದ್ದರು. ಈ ಸಂದರ್ಭದಲ್ಲಿ ಶಿವಣ್ಣನ ನಡೆ ನುಡಿಗಳನ್ನು ಹತ್ತಿರದಿಂದ ಗಮನಿಸಿದ ಪೂಜ್ಯ ಉದ್ದಾನ ಶಿವಯೋಗಿ, ಶಿವಣ್ಣ ಉನ್ನತ ಶಿಕ್ಷಣ ಪಡೆಯ ಬಯಸಿದಾಗ ಬೆಂಗಳೂರಿನ ಶ್ರೀ ತೋಂಟದಪ್ಪನ ಛತ್ರದಲ್ಲಿ ಉಚಿತವಾಗಿ ಊಟ ವಸತಿಗೆ ಶಿಫಾರಸ್ಸು ಮಾಡಿ ಜಾಗ ಕೊಡಿಸಿದರು. ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಪದವಿಯನ್ನು ಆಂಗ್ಲ ಮಾಧ್ಯಮದಲ್ಲಿ ಪಡೆದರು.

**ಶ್ರೀ ಸಿದ್ಧಗಂಗಾ ಶ್ರೀಗಳ ಮುಖದಲ್ಲಿ ಮಗುವಿನ ಮುಗ್ಧತೆ :** ಎಂತಹಾ ಪ್ರಕಾಶಮಾನ ಪ್ರಖರತೆ ಬೆಳಕು ಬೀರುವ ಜೋಡಿ ಹಣತೆಯಂತೆ ಅವರ ಕಣ್ಣಾಲಿಗಳು, ಕುಡಿಬಾಳೆ ಎಲೆಯಂತೆ ಅವರೆರಡು ಕರ್ಣಕುಂಡಲಿಗಳು, ಧೀಮಂತ ವ್ಯಕ್ತಿತ್ವ ಹೊಂದಿದ ಮಹಾಸಂತ ಮಹಾಂತ ಎಂದು ಕರೆಸಿಕೊಂಡವರು. ಆಗಸ ತುಂಬಿದ ಅಭಿಮಾನದ ದನಿಯಾದವರು. ಮುಖದಲ್ಲಿ ಯೋಗಿಯ ಬೆಡಗು ಉಳ್ಳವರು. ಮಗುವಿನಂತಾ ಮುಗ್ಧತೆಯ ನಗು ಉಳ್ಳವರು, ಧನ್ಯತೆಯ ಭಾವ ಉಳ್ಳವರಾಗಿದ್ದರು ಪೂಜ್ಯರು.

**ನೂರು ವರ್ಷ ಗಡಿದಾಟಿದರೂ ತನ್ನ ದಿನಚರಿ ಬಿಡದ ಪೂಜ್ಯರು :** ಗಡಿದಾಟಿದವನಿಗೆ ಗರುಡಿಮನೆ ಚಿಂತೆ ಏಕೆ ಎಂಬ ಯಶೋಗಾಥೆಯೊಂದಿದೆ. ಆದರೆ ಈ ಗಾಥೆ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗಳಿಗೆ ಯಾವುದೇ ಕಾರಣಕ್ಕೂ ಅನ್ವಯಿಸುವುದಿಲ್ಲ ಎಂದು ಹತ್ತಿರದಿಂದ ಬಲ್ಲವರಿಗೆ ವೇದ್ಯವಾಗದೆ ಇರದು. ಶ್ರೀಗಳಿಗೆ ನೂರು ತುಂಬಿದರೂ ಸದಾ ಹದಿನಾರರ ಹರೆಯದ ಹುಡುಗನಂತೆ ಓಡಾಡಿಕೊಂಡು ಒಂದು ಸಂಚಲನವನ್ನು ಸೃಷ್ಟಿಸಿದ್ದರು. ಪ್ರಕೃತಿಯ ವಯೋಮಿತಿಯನುಸಾರ ಬಂದಿರುವ ವೃದ್ಧಾಪ್ಯವನ್ನೂ ಲೆಕ್ಕಿಸದೆ ಸ್ವಾಗತಿಸಿ ಸ್ವೀಕರಿಸಿದ ಮಹಾನ್ ದೈವಾನುಸಂಭೂತರಿವರು.

**ದಿನವಿಡೀ ಅವಿರತವಾಗಿ ಶ್ರಮಿಸಿದ ಪೂಜ್ಯರು :** ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಪ್ರತಿದಿನ ಬೆಳಗಿನ







ಎರಡೂವರೆ ಗಂಟೆಗೆ ಸರಿಯಾಗಿ ಎದ್ದು, ಶರಣರ ವಚನ ಹಾಗೂ ವಾಚನ ಮತ್ತು ಇದರ ವ್ಯಾಖ್ಯಾನ ಮಾಡಿ ಮೂರು ಗಂಟೆಗೆ ಸ್ನಾನ ಮುಗಿಸಿ, ಐದೂವರೆ ಗಂಟೆಯವರೆಗೆ ವಿಧಿವಿಧಾನಗಳೊಂದಿಗೆ ಪೂಜೆ ಸಲ್ಲಿಸಿದ ನಂತರ ಪ್ರಸಾದ ಮುಗಿಸಿ ಆರು ಗಂಟೆಗೆ ಸರಿಯಾಗಿ ತಮ್ಮ ಕಛೇರಿಗೆ ಆಗಮಿಸುತ್ತಿದ್ದರು. ಅಲ್ಲಿಗೆ ಬಂದ ಕಾಗದ ಪತ್ರಗಳ ಅಹವಾಲುಗಳಿಗೆ ಮಾರುತ್ತರವನ್ನು ಸ್ವತಃ ಕೈ ಬರವಣಿಗೆಯಲ್ಲೇ ನೀಡುತ್ತಿದ್ದರು. ನಂತರ ಒಂಭತ್ತು ಗಂಟೆಯವರೆಗೆ ದಿನಪತ್ರಿಕೆ ಓದಿದ ನಂತರ ಅಡುಗೆ ಮನೆಗೆ ಹೋಗಿ ಸ್ವತಃ ಮುದ್ದೆ ತಿರುಗಿಸುವುದು, ಸೌದೆ ಒಡೆಯುವುದು, ಗ್ರಾಮೀಣ ಹಿನ್ನೆಲೆಯಿಂದ ಬೆಳೆದು ಬಂದ ಶ್ರೀಗಳು ದನಕರುಗಳ ಯೋಗಕ್ಷೇಮ ನೋಡುವುದು, ಸಮಯ ಸಿಕ್ಕಾಗಲೆಲ್ಲಾ ಹೊಲಗದ್ದೆಗಳಲ್ಲಿ ನೇಗಿಲ ಯೋಗಿಯಾಗಿ ಬೇಸಾಯವನ್ನೂ ಮಾಡುತ್ತಿದ್ದರು.

ಪ್ರತಿದಿನ ಎಂಥದೇ ಸಂದರ್ಭ ಬಂದರೂ ತ್ರಿಕಾಲ ಪೂಜೆ ಮಾಡುವುದನ್ನು ಎಂದೂ ಬಿಟ್ಟವರಲ್ಲ. ಪ್ರತಿದಿನ ಮಧ್ಯಾಹ್ನ ಎರಡೂವರೆ ಗಂಟೆಗೆ ಸ್ನಾನ ಮುಗಿಸಿ, ಪೂಜೆ, ಪ್ರಸಾದ ಮುಗಿಸಿ ಪುನಃ ಕಛೇರಿಗೆ ಆಗಮಿಸಿ ಐದು ಗಂಟೆಯವರೆಗೆ ಮಠದ ವ್ಯವಹಾರದ ತಪಾಸಣೆ ನಡೆಸಿ ತದನಂತರ ಅಡುಗೆ ಮನೆಯಲ್ಲಿ ಮಾಡಿದ್ದ ತಿಂಡಿ ತಿನಿಸುಗಳ ಆಹಾರ ಸಾಮಾಗ್ರಿಗಳ ವೀಕ್ಷಣೆ ನಡೆಸುವುದು. ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ ಏಳಕ್ಕೆ ಸುಮಾರು ಹತ್ತು ಸಾವಿರ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನೆಯಲ್ಲಿ ನೆರೆದಿರುವ ವಿದ್ಯಾರ್ಥಿಗಳಿಗೆ ನಾಲ್ಕು ಹಿತೋಪದೇಶದ ನುಡಿಗಳನ್ನು ಮಕ್ಕಳ ಮನದಲ್ಲಿ ಬಿತ್ತನೆ ಮಾಡಿ ಸಂಜೆ ಏಳೂವರೆಯಿಂದ ಎಂಟುವರೇವರೆಗೆ ಮಠದ ವ್ಯವಹಾರದ ಬಗ್ಗೆ ಆಡಳಿತಾಧಿಕಾರಿಗಳ ಜೊತೆ ವಿಚಾರ ವಿನಿಮಯ ನಡೆಸಿ ನಂತರ ಪೂಜೆ ಪ್ರಸಾದ ಮುಗಿಸಿ ರಾತ್ರಿ ೧೦ ರಿಂದ ೧೧ ರವರೆಗೆ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕದ ಅಭ್ಯಾಸ ವೀಕ್ಷಿಸುತ್ತಿದ್ದರು. ಇದೂ ಎಂದಿಗೂ ಚಾಚೂ ತಪ್ಪದೆ ನಡೆಯುವಂತದ್ದು. ಪೂಜ್ಯರ ಸಮಯಪಾಲನೆ ಎಂತಹವರನ್ನು ಬೆಚ್ಚಿ ಬೀಳಿಸುವಂತದ್ದು.

**ಶ್ರೀ ಸಿದ್ಧಗಂಗಾ ಮಠವೇ ವಿದ್ಯಾರ್ಥಿಗಳ ಶಿಕ್ಷಣಕ್ಕೆ ರಹದಾರಿ :** ಅಂದಿನ ದಿನಮಾನಗಳಲ್ಲಿ ಶಿಕ್ಷಣಕ್ಕೆ ಎಲ್ಲಿಯೂ ನೆಲೆಕಾಣದೆ ಇರುವ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಮಠವೇ ಶಿಕ್ಷಣಕ್ಕೆ ರಹದಾರಿ ಎಂದು ಪರಿಭಾವಿಸಿದ ಜನತೆ ನಾಡಿನಾದ್ಯಂತ ರೈತರು, ಕಾರ್ಮಿಕರು ತಮ್ಮ ಮಕ್ಕಳನ್ನು ಸಾಗರೋಪಾದಿಯಲ್ಲಿ ಶ್ರೀಮಠಕ್ಕೆ ಸೇರಿಸಿ ಕೃತಾರ್ಥರಾದವೆಂದು ಭಾವಿಸುತ್ತಿದ್ದರು. ಪ್ರತಿಯೊಬ್ಬರೂ ತಮ್ಮ ಕೈಲಾದಷ್ಟು ವಿವಿಧ ರೀತಿಯಲ್ಲಿ ದಾನ ಧರ್ಮ ಮಾಡುವುದಲ್ಲದೆ, ಹಲವಾರು ಉದಾರ ದಾನಿಗಳಿಂದ ದೇಣಿಗೆಯನ್ನು ಕೊಡಿಸುತ್ತಿದ್ದರು. ಇದರಿಂದ ಶ್ರೀ ಸಿದ್ಧಗಂಗೆ ಮಹಾತ್ಮೆ ಹಾಗೂ ಶ್ರೀ ಸಿದ್ಧಲಿಂಗೇಶ್ವರ ಮಹಾಗುರುವಿನ ಕಾರುಣ್ಯವು ಎಂತಹದು ಎಂದು ವೇದ್ಯವಾಗುತ್ತದೆ.

**ಅಟವೀ ಸ್ವಾಮಿಗಳು ಅಂದು ಹಚ್ಚಿದ ಅಡುಗೆ ಒಲೆ ಇಂದಿಗೂ ನಂದದೆ ಇರುವುದೇ ವಿಸ್ಮಯ :** ಕೇವಲ ೧೫ ವಿದ್ಯಾರ್ಥಿಗಳಿಗೆ ಪ್ರಾರಂಭವಾದ ವಿದ್ಯಾರ್ಥಿ ನಿಲಯ ಇದೀಗ ಇದು ೧೦ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಆಹಾರ, ಆಶ್ರಯ, ಅಕ್ಷರ ಪಡೆಯಲು ಕಾರಣವಾಗಿದ್ದು, ದೇಶ ವಿದೇಶಗಳಲ್ಲಿ ಕೋಟ್ಯಾಂತರ ಜನ ತಮ್ಮ ಜೀವನದ ನೆಲೆ ಕಂಡುಕೊಂಡಿದ್ದಾರೆ. ಅಂದು ಹಚ್ಚಿದ ಅಡುಗೆ ಒಲೆ ಇಂದಿಗೂ ಉರಿಯುತ್ತಿದ್ದು ಇದು ಎಂದೆಂದಿಗೂ ನಂದದೆ ಇರುವಂತೆ ನೋಡಿಕೊಳ್ಳುವ ಜವಾಬ್ದಾರಿ ಸಮಸ್ತ ಜನತೆ ಮೇಲೆ ನಿಂತಿದೆ.

ಈಗ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಸಾಕ್ಷಾತ್ ಪ್ರತಿರೂಪವಾಗಿ ಹೊರಹೊಮ್ಮಿ ಬಂದಿರುವ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ತನ್ನ ಪೂಜ್ಯರ ನೆರಳನ್ನೇ ಹಿಂಬಾಲಿಸಿಕೊಂಡು ನಡೆದು ಇವರು ಹಾಕಿಕೊಟ್ಟ ಆಚರಣೆಯ ಎಲ್ಲಾ ಕಟ್ಟು ಪಾಡುಗಳನ್ನು ಚಾಚೂ ತಪ್ಪದೆ ಅನುಸರಿಸಿ ಬಂದು ಶ್ರೀಗುರುವಿನ ಕಾರುಣ್ಯ ಪಡೆದು ೫.೭.೧೯೬೬ ರಂದು ಸದ್ದುಗದ್ದಲವಿಲ್ಲದೆ ಸಿದ್ಧಗಂಗೆಯ ಗದ್ದುಗೆ ಏರಿದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಪೂಜ್ಯರು ಹೊರಿಸಿದ ಹೊರೆಯನ್ನು ಒಂದು ಕಪ್ಪುಚುಕ್ಕಿಗೂ ಅವಕಾಶ ನೀಡದೆ ಕಾಯಕ ನಿರ್ವಹಿಸಿ ಸಫಲತೆ ಪಡೆದು ಧನ್ಯಭಾವದಿಂದ ಸಮಸ್ತ ಭಕ್ತಾದಿಗಳ ಹಾಗೂ ಗುರುಗಳ ಪ್ರೀತಿಗೆ ಪಾತ್ರರಾಗಿರುವುದಂತೂ ಸತ್ಯ. ತನ್ಮೂಲಕ ಹರಗುರು ಚರಮೂರ್ತಿಗಳಿಂದ ದಿನಾಂಕ ೨೨.೧.೨೦೧೯ ರಂದು ಪಟ್ಟಾಧಿಕಾರ ಸ್ವೀಕರಿಸಿ ಪೀಠಾಧ್ಯಕ್ಷರಾದ ಶ್ರೀಗಳಿಗೆ ಹಿರಿಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ನೀಡುತ್ತಿದ್ದ ಸಕಲ ಗೌರವಾದರಗಳು, ಸೂಕ್ತ ಸಲಹೆ, ಸಹಾಯ, ಸಹಕಾರಗಳನ್ನು ಇವರಿಗೂ ನೀಡಿ ಹಿರಿಯ ಸ್ವಾಮಿಗಳ ಉತ್ಕಟ ಅಶೋತ್ತರಕ್ಕೆ ಯಾವುದೇ ಚ್ಯುತಿ ತಾರದೆ ಕಾರ್ಯೋನ್ಮುಖರಾಗುವುದು ಸಮಸ್ತ ಭಕ್ತಾದಿಗಳ ಆದ್ಯ ಕರ್ತವ್ಯ.





ಚಿಂತನೆ

# ಗದ್ದುಗೆ – ಗದ್ದಿಗೆ : ಒಂದು ಜಿಜ್ಞಾಸೆ

– ಕೋ.ರಂ. ಬಸವರಾಜು *

ವಿಶಿಷ್ಟ ಪದಾರ್ಥದ ಚಿಂತನೆ ಮಾಡುವಾಗ ವ್ಯಾಕರಣ, ಕೋಶ, ಆಪ್ತವಾಕ್ಯ, ವ್ಯವಹಾರಾದಿ ಶಕ್ತಿಗ್ರಾಹಕಗಳನ್ನೂ ಪ್ರಕರಣ, ಲಿಂಗಾದಿ ಅರ್ಥನಿಯಾಮಕಗಳನ್ನು ಲಾಕ್ಷಣಿಕರು ಗಮನಿಸುವರು. ಈ ಹಿನ್ನಲೆಯಲ್ಲಿ ಗದ್ದುಗೆ-ಗದ್ದಿಗೆ ಶಬ್ದದ ಅರ್ಥವನ್ನು ವಿವೇಚಿಸುವುದು.

**I. ಕೋಶತಃ**

೧) ಕನ್ನಡಿಗರಿಗಿಂತಲೂ ಕನ್ನಡವನ್ನು ಅತಿಶಯವಾಗಿ ಅಧ್ಯಯನ ಮಾಡಿ ಪ್ರೀತಿಸಿದ ರೆವೆರೆಂಡ್ ಕಿಟ್ಟೆಲ್‌ರವರ ಶಬ್ದಕೋಶದಲ್ಲಿ

ಗದ್ದುಗೆ – ಗದ್ದಿಗೆ = ಪಟ್ಟವಣೆ, ನರೇಂದ್ರಾಸ, ಸಿಂಹಾಸನ, ಔಶೀರ

ಗದ್ದಿಗೆ – ಗದ್ದುಗೆ – ಗರ್ದುಗೆ = ಪೀಠ, ಆಸನ, ಔಶೀರ, ಜಂಗಮರ ಸಮಾಧಿ

(a tomb – monument of Jangamas) ಎಂದಿದೆ.

**ಜಿಜ್ಞಾಸೆ** : ಇಲ್ಲಿ ಗದ್ದುಗೆ-ಗದ್ದಿಗೆ ಎಂಬ ಎರಡೂ ನಾಮಪದದ ರೂಪಗಳನ್ನು ಕೊಟ್ಟು ಪಟ್ಟವಣೆ (ಪೀಠ) ಸಿಂಹಾಸನ(ನರೇಂದ್ರಾಸನ) ಮತ್ತು ಜಂಗಮರ ಸಮಾಧಿ (ಐಕ್ಯಸ್ಮಾರಕ) ಎಂಬ ಅರ್ಥಗಳನ್ನು ಕೊಡಲಾಗಿದೆ. ಇವುಗಳಲ್ಲಿ ಪಟ್ಟವಣೆ (ಪಟ್ಟಾಭಿಷಿಕ್ತವಾದಾಗ ಏರುವ ಮಣೆ) ಎಂಬುದರ ಪರ್ಯಾಯವೇ ನರೇಂದ್ರಾಸನ. ಹಾಗಾಗಿ ರಾಜಸಿಂಹಾಸನ ಮತ್ತು ಜಂಗಮರ ಸಮಾಧಿ ಎಂಬ ಎರಡು ಅರ್ಥಗಳನ್ನು ಗ್ರಹಿಸಬಹುದಾಗಿದೆ.

೧. **ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟುವಿನಲ್ಲಿ :**

ನಿಘಂಟುವಿನ ಸಂಪುಟ-೨ ಪುಟ ೨೪೩೪ರಲ್ಲಿ ಗರ್ದುಗೆ ಶಬ್ದಕ್ಕೆ ಮೂರು ಅರ್ಥಗಳನ್ನು ಕೊಡಲಾಗಿದೆ.

ಗರ್ದುಗೆ > ಗದ್ದುಗೆ (ನಾಮಪದ)

ಇದಕ್ಕೆ ೧. ದೇವಾಲಯ ಅಥವಾ ಶರಣರ ಗದ್ದುಗೆಯ ದೀಪಾರಾಧನೆಗೆ ಬಿಟ್ಟ ಕೊಡುಗೆ ೨. ರಾಜರು ಕುಳಿತುಕೊಳ್ಳುವ ಸಿಂಹಾಸನ ಅಥವಾ ಭದ್ರಾಸನ ೩. ವೀರಶೈವ ಜಂಗಮರ ಸಮಾಧಿ ಎಂಬ ಮೂರು ಅರ್ಥಗಳನ್ನು ಪ್ರಯೋಗಗಳೊಂದಿಗೆ ಕೊಡಲಾಗಿದೆ.

**ಜಿಜ್ಞಾಸೆ** : ವಿವಕ್ಷಿತಾರ್ಥ ನಿಯಾಮಕವಾದ ಪ್ರಕರಣದ ಪ್ರಕಾರ ವೀರಶೈವ ಜಂಗಮರ ಸಮಾಧಿ ಎಂಬ ಅರ್ಥವೇ ಸೂಕ್ತವಾಗಿದೆ.

**II. ವ್ಯಾಕರಣತಃ :**

ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಸಹಜಶಿಥಿಲದ್ವಿತ್ವ ಪದಗಳ ಪಟ್ಟಿಯಲ್ಲಿ 'ಗುರ್ದುಗೆ' ಎಂಬ ಪದವನ್ನು ಕೊಟ್ಟಿರುತ್ತಾನೆ (ಸೂತ್ರ ೫೫). ಆದರೆ ಇದಕ್ಕೆ ಕವಿಪ್ರಯೋಗವನ್ನು ಕೊಟ್ಟಿರುವುದಿಲ್ಲ. ಬರ್ದಿಲಂ ಸಗ್ಗಕ್ಕೆ ಪೆಸರ್ ಎಂದು ಹೇಳಿದಂತೆ ಗುರ್ದುಗೆ ಶಬ್ದಕ್ಕೆ ಅರ್ಥವನ್ನು ಹೇಳಿರುವುದಿಲ್ಲ. ಇದರ ಈ ಅರ್ಥವನ್ನು ನಿಟ್ಟೂರು ನಂಜಣ್ಣಾರಾಧ್ಯಾನ ಟೀಕೆಯಲ್ಲಾಗಲಿ ಲಿಂಗಣಾರಾಧ್ಯನ ವೃತ್ತಿಯಲ್ಲಾಗಲಿ ಸ್ಪಷ್ಟಪಡಿಸಿಲ್ಲ.

**ಜಿಜ್ಞಾಸೆ** : ಇನ್ನು ಗರ್ದು > ಗರ್ದುಗೆ > ಗದ್ದಿಗೆ ನಿಷ್ಪತ್ತಿಯ ಬಗ್ಗೆ ಆಲೋಚಿಸಬಹುದಾಗಿದೆ. ಸಂಸ್ಕೃತ ಗರ್ತಾ ಶಬ್ದಕ್ಕೆ ಗವಿ ಗುಹೆ ಎಂಬ ಅರ್ಥವಿದೆ. ಇದೂ ವೀರಶೈವಜಂಗಮರ ಸಮಾಧಿಯನ್ನು ಸಂಕೇತಿಸುತ್ತದೆ. ಉದಾ: ಗೋಸಲ ಸಿದ್ಧೇಶ್ವರರ ಸಮಾಧಿಯನ್ನು ಸಿದ್ಧಗಂಗೆಯ ಗವಿಯಲ್ಲಿ ನೋಡಬಹುದು.

---

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.





**III. ಆಪ್ತವಾಕ್ಯತಃ :**

'ಯಥಾರ್ಥಾವಬೋಧಕಃಆಪ್ತಃ' ಎಂಬ ನ್ಯಾಯಾನುಸಾರ ಆಪ್ತವಾಕ್ಯವೆಂದರೆ ಶರಣರ ವಚನಗಳು.

೧. **ಅಲ್ಲಮಪ್ರಭುವಿನ ವಚನದಲ್ಲಿ..**

.....................ತೀರ್ಥವ(ಪಾದೋದಕ) ಪಡೆಕೊಂಬ
ಲಿಂಗಭಕ್ತನು ಜಂಗಮಲಿಂಗಮೂರ್ತಿಯ
ಸಮ್ಮುಖದಲ್ಲಿ
ಗರ್ದುಗೆಯ ರಚಿಸಿಕೊಂಡು ಅಷ್ಟಾಂಗಯುಕ್ತನಾಗಿ
'ಶರಣಾರ್ಥಿ ಸ್ವಾಮಿ!' ಜಂಗಮಲಿಂಗಾರ್ಚನೆಗೆ
ಅಪ್ಪಣೆಯ ದಯಪಾಲಿಸಬೇಕೆಂದು ಬೇಡಿಕೊಂಡು
ಆ ಗರ್ದುಗೆಯ ಮೇಲೆ ಮೂರ್ತ ಮಾಡಿ
ಕೊಂಡು......... (ವಚನ ಸಂಖ್ಯೆ ೮೦೦)

೨. **ಚನ್ನಬಸವಣ್ಣನವರ ವಚನದಲ್ಲಿ –**

'.......... ಅಷ್ಟಾಂಗಯುಕ್ತನಾಗಿ ವಂದನಂಗೈದು
ಪಾದಪೂಜೆಗೆ ಅಪ್ಪಣೆಯ ತೆಗೆದುಕೊಂಡು
ಅವರ ಸಮ್ಮುಖದಲ್ಲಿ ಗದ್ದುಗೆಯ ಹಾಕಿಕೊಂಡು
ಅದರ ಮೇಲೆ ಮೂರ್ತವ ಮಾಡಿ
ಕೊಂಡು............... (ವಚನ ಸಂಖ್ಯೆ ೧೬೫)

೩. **ದೇಶಿಕೇಂದ್ರ ಸಂಗನಬಸವಯ್ಯನ ಷಟ್‌ಸ್ಥಲದ ವಚನದಲ್ಲಿ–**

ನಡೆವ ದಾರಿಯಲೆನ್ನ ಒಡೆಯರು ಬರಲು
ಬಿಳಿಯಂಬರ ಗರ್ದುಗೆಯ ಮೇಲಿರಿಸಿ
ಪಾದಪ್ರಕ್ಷಾಲನೆಯ ಮಾಡಿ
ಇಚ್ಛಿತಪದಾರ್ಥವ ಮುಚ್ಚಿ ನೀಡಿ
ನೆಚ್ಚಿ ಮೆಚ್ಚಿ ನಲಿದಾಡುವೆ
ಹೆಚ್ಚಿ ಉಳಿಮೆಯ ಶೇಷವ ಕೊಂಡು
ಪಾದೋದಕವ ಧರಿಸಿ ಪಾವನನಾದೆನು
ಗುರುನಿರಂಜನಚನ್ನಬಸವಲಿಂಗಸಾಕ್ಷಿಯಾಗಿ

೪. **ಶಿವಯೋಗಿ ಸಿದ್ಧರಾಮನ ವಚನದಲ್ಲಿ –**

ಕ್ರಿಯೆಯಲ್ಲಿ ಮಗ್ನವಾದ ಬಳಿಕ
ಐಕ್ಯದ ವಿಚಾರಬೇಕಿಲ್ಲ
ಗುರುವಿನ ಗದ್ದುಗೆ ಬೇಕಿಲ್ಲ
ಗಣ ಸಂಮ್ಮೇಳನದ ಪೂಜೆ ಮೊದಲೆ ಬೇಕಿಲ್ಲ
ಕಪಿಲಸಿದ್ಧಮಲ್ಲಿಕಾರ್ಜುನಂಗೆ ನಿನಗೆ ಭೇದವಿಲ್ಲ
ವೆಂಬುದು ಈಗಳೆ ಬೇಕಿಲ್ಲ ಕೇಳಾ ಪ್ರಭುವೆ.
(ವಚನ ಸಂಖ್ಯೆ ೧೩೭)

**ಜಿಜ್ಞಾಸೆ** : ಅಲ್ಲಮಪ್ರಭು, ಚನ್ನಬಸವಣ್ಣ, ದೇಶಿಕೇಂದ್ರ ಸಂಗನಬಸವಯ್ಯ ಇವರ ವಚನಗಳಲ್ಲಿ ಪಾದೋದಕ ಪ್ರಕ್ರಿಯೆಯ ಪ್ರಕರಣದಿಂದಾಗಿ ಗರ್ದುಗೆ ಅಥವಾ ಗದ್ದುಗೆ ಶಬ್ದಕ್ಕೆ ಜಂಗಮರು ಅಥವಾ ಭಕ್ತರು ಪಾದೋದಕ ಸ್ವೀಕಾರ ಮಾಡುವಾಗ ಕುಳಿತುಕೊಳ್ಳುವ (ಆಸ್ತರ) ಹಾಸು ಎಂಬ ಅರ್ಥವು ಸ್ಪಷ್ಟವಾಗಿದೆ. ಆದರೆ ಸಿದ್ಧರಾಮನ ವಚನದಲ್ಲಿ ಇದು ವೀರಶೈವ ಜಂಗಮರ ಸಮಾಧಿ ಎಂಬುದಾಗಿ ಉಲ್ಲೇಖಿತವಾಗಿದೆ.

**IV. ವ್ಯಾವಹಾರತಃ**

**ಜಿಜ್ಞಾಸೆ** : ವ್ಯವಹಾರದ ರೂಢಿಯಲ್ಲಿ ಗದ್ದುಗೆ ಶಬ್ದವು ಕೇವಲ ಜಂಗಮರು ಭಕ್ತರು ಕುಳಿತುಕೊಳ್ಳುವ ಹಾಸು ಮಾತ್ರವಲ್ಲ. ಕೊಡಮ್ಮ ಮಣ್ಣಮ್ಮ ರಂಗನಾಥ ಮುಂತಾದ ದೇವತೆಗಳನ್ನು ಕರೆಸಿದಾಗ ಮೂರ್ತಗೊಳಿಸಲು ಗದ್ದುಗೆ ಹಾಕು(ಹಾಸು) ಎಂಬ ಅರ್ಥವೂ ವ್ಯವಹಾರದಲ್ಲಿದೆ. ಇದರಂತೆ ಪೀಠ, ಪಟ್ಟವಣೆ, ನರೇಂದ್ರಾಸನ ಎಂಬ ಅರ್ಥದ ಜೊತೆಗೆ ಗುರುವಿರಕ್ತರು ಕುಳಿತುಕೊಳ್ಳುವ ಪೀಠ ಅಥವಾ ಭದ್ರಾಸನಕ್ಕೂ ಗದ್ದುಗೆ ಪದದ ಅರ್ಥ ವಿಸ್ತಾರಗೊಂಡಿದೆ.

ಇಷ್ಟೆಲ್ಲಾ ಅರ್ಥರಾದ್ಧಾಂತವಿದ್ದರೂ ವೀರಶೈವ–ಲಿಂಗಾಯತ ಪರಿಭಾಷೆಯಲ್ಲಿ ಗರ್ದುಗೆ > ಗದ್ದುಗೆ > ಗದ್ದಿಗೆ ಶಬ್ದದ ಅರ್ಥಪರಿಭಾವನೆಯನ್ನು ಎರಡು ಹಂತಗಳಲ್ಲಿ ಸ್ವೀಕರಿಸಬಹುದು. ಒಂದನೆಯದು ಗುರುಜಂಗಮರನ್ನು ಪೂಜೆ ಪಾದೋದಕ ಪ್ರಕ್ರಿಯೆಯಲ್ಲಿ ಮೂರ್ತಗೊಳಿಸಲು ಪಟ್ಟವಣೆ ಅಥವಾ ಪೀಠ ಮತ್ತು ಅದರ ಮೇಲೆ ಹಾಕುವ ಹಾಸು ಎಂಬುದು. ಎರಡನೆಯದೆಂದರೆ ವೀರಶೈವ ಜಂಗಮರ ಸಮಾಧಿ ಎಂಬುದು.

**ಈ ಮೇಲಿನ ಪ್ರಾಕರಣಿಕಾರ್ಥದಲ್ಲಿ ಗದ್ದುಗೆ ಗದ್ದಿಗೆ ಎರಡೂ ಶಬ್ದಗಳು ಸಮಾನಾಂತರವಾಗಿ ಬಳಕೆಯಲ್ಲಿದ್ದರೂ ಗದ್ದುಗೆ ಶಬ್ದಕ್ಕಿರುವ ಇತರ ಸಿಂಹಾಸನಾದಿ ಅರ್ಥಗಳನ್ನು ವ್ಯಾವೃತ್ತಗೊಳಿಸಿ ವಿಶೇಷವಾಗಿ ಜಂಗಮರ ಸಮಾಧಿಗೆ ಗದ್ದಿಗೆ ಎಂಬುದಾಗಿಯೂ ಮೂರ್ತಗೊಳ್ಳುವ ಹಾಸಿಗೆಗೆ ಗದ್ದುಗೆ ಎಂಬುದಾಗಿಯೂ ರೂಢಿಗತವಾದರೆ ಸಾಧು ಎಂಬುದು ನನ್ನ ವಿನಮ್ರ ಅಭಿಪ್ರಾಯ.**

ಲೇಖನ

# ಅಲ್ಲಮ-ಸಿದ್ಧರಾಮ - ಎರಡು ಪರಂಜ್ಯೋತಿಗಳು

- ವಿದ್ವಾನ್ ಎಸ್. ಷಡಕ್ಷರಯ್ಯ
ತುಮಕೂರು

ಅಲ್ಲಮಪ್ರಭು ಸ್ವಯಂ ಪರಿಪೂರ್ಣ ಸಿದ್ಧ ! ಅವನು ಜೀವನ್ಮುಕ್ತ. ಹನ್ನೆರಡನೆಯ ಶತಮಾನದಲ್ಲಿ ಸಿದ್ದೇಂದ್ರನಾಗಿದ್ದನು. ಅವನು ಮಾಯಾ-ಕೋಲಾಹಲ ! ನಿರಂಜನ ಸಿದ್ಧ ! ಅವನ ಸಾಧನಮಾರ್ಗ ಅವ್ಯಕ್ತ; ಅನೂನ; ಅಚಿಂತ್ಯ ! ಅವನು ಲಿಂಗಾಂಗ ಸಾಮರಸ್ಯ ಬ್ರಹ್ಮ! ಅಖಂಡ ಪರಂಜ್ಯೋತಿ ರೂಪಿ. ಸಾಕಾರನಾಗಿ ಕಂಡರೂ ನಿರಾಕಾರನಾಗಿದ್ದನು. ಶಿವಯೋಗ ಸಿದ್ಧಿಯಲ್ಲಿ ಮಹೋನ್ನತನಾಗಿದ್ದನು. ಲೋಕದ ಕಾಳಿಕೆಯನ್ನು ಹರಿಸಿ, ಜನಮನದಲ್ಲಿ ಆತ್ಮಜ್ಯೋತಿಯನ್ನು ಬೆಳಗಿಸಿ ಸಾಧಕರನ್ನು ಸಿದ್ಧಪದವಿಯಲ್ಲಿ ನೆಲೆಗೊಳಿಸುತ್ತಿದ್ದನು. ಅನಿಮಿಷಾರ್ಯ ಶಿವಯೋಗಿಯ ಚಿಜ್ಜ್ಯೋತಿಯಿಂದ ಅಲ್ಲಮನ ದೇಹ ಲಿಂಗಮಯವಾಗಿ ಬೆಳಗುತ್ತಿತ್ತು. ಆ ಶಿವಯೋಗಿ ಅಲ್ಲಮನಿಗೆ ಇಷ್ಟಲಿಂಗ ಪ್ರದಾನ ಮಾಡಲಿಲ್ಲ. ಅಲ್ಲಮನಿಗೆ ಮೊದಲೇ ಲಿಂಗದೀಕ್ಷೆಯಾಗಿತ್ತು. ಅನಿಮಿಷಾರ್ಯನ ಸಂದರ್ಶನದಿಂದ ಮಹಾಪ್ರಭೆಯೊಂದು ಅವನ ದೇಹದಲ್ಲಿ ಅಡಗಿತು. ಸುವರ್ಣ ಅಪರಂಜಿಯಾಯಿತು. ಅಲ್ಲಮನಿಗೆ ಇಷ್ಟಲಿಂಗ ಧಾರಣೆ ಯಾರಿಂದಾಯಿತೆಂಬುದು ಮುಖ್ಯವಲ್ಲ. ಅದು ಸಮಾಜಧರ್ಮ ಪ್ರಕ್ರಿಯೆ. ನೂರುಕಾಲ ಸಾಧನೆ ಮಾಡಿ ಪಡೆಯಬಹುದಾಗಿದ್ದ ಆತ್ಮಸಿದ್ಧಿಯನ್ನು ಅನಿಮಿಷಾರ್ಯನ ದರ್ಶನದಿಂದ ಅಲ್ಲಮ ಮೂರು ಕಾಲದಲ್ಲಿಯೇ ಪಡೆದನು! ಇದು ಆ ಶಿವಯೋಗಿಯ ಕರುಣ ಪ್ರಸಾದ! ಅವನು ಶಿವಾನುಭವಿ. ಸ್ವಯಂ ಸಿದ್ಧಪುರುಷ. ಪರಮ ಗುಹೇಶ್ವರ. ಪೂರ್ಣಶಿವಯೋಗಿ.

**ಸಹಸ್ರದಶ ಕಮಲ ಮಧ್ಯಮ ಪಂಚಪತ್ರ, ಆ ಪತ್ರದ ಮಧ್ಯದಲ್ಲಿ ಮಂಡಲತ್ರಯ, ಆ ಮಂಡಲತ್ರಯ ಮಧ್ಯದಲ್ಲಿ ಪ್ರಣವಪೀಡಯ ಕಂಡು ಹರಿಷಿತನಾದೆನಯ್ಯಾ ಅಖಂಡೇಶ್ವರಾ** ॥ ಎಂಬ ವಚನದಲ್ಲಿ ಹೇಳಿರುವಂತೆ ಅಲ್ಲಮ ಶ್ರೀಮೂರ್ತಿಯಾಗಿದ್ದನು. ಬಳ್ಳಿಗಾವಿಯಲ್ಲಿ ಅಲ್ಲಮ ಶಿವಧರ್ಮ ವಲಯದಲ್ಲಿ ಬೆಳೆದು ಶಿವಜೀವಿಯಾಗಿದ್ದನು. ಭಕ್ತರನು ಉದ್ಧರಿಸುತ್ತ ಸೊನ್ನಲಗೆಯತ್ತ ಬಂದನು. ಬಳ್ಳಿಗಾವಿ ಆ ಕಾಲದಲ್ಲಿ ಒಂದು ಶೈವ ತತ್ತ್ವಕ್ಷೇತ್ರವಾಗಿತ್ತು. ಅಲ್ಲಮನ ಕುಲಗೋತ್ರಗಳ ವಿಚಾರದಲ್ಲಿ ವಿದ್ವಾಂಸರ ಅಭಿಪ್ರಾಯ ಬೇರೆ ಬೇರೆ ಇದೆ. ಶರಣ ಧರ್ಮದಲ್ಲಿ ಜಾತಿ, ಮತ, ಪಂಥಗಳಿಗೆಡೆಯಿಲ್ಲ. ಕಲ್ಯಾಣದಲ್ಲಿ ಬಸವಣ್ಣ ಇಂಥ ಶರಣ ಮಾರ್ಗವನ್ನು ಹಿಡಿದಿದ್ದನು. ಆದರಿಂದಲೇ ಅಲ್ಲಮ ಕಲ್ಯಾಣದತ್ತ ಬಂದನು. ಬಸವಣ್ಣನ ಮಹಾಮನೆಯಲ್ಲಿ ಶರಣತತ್ತ್ವ ಪ್ರಚಾರ ಬೆಳೆಯುತ್ತಿತ್ತು. ಅವನು ಮಾರ್ಗ ಮಧ್ಯದಲ್ಲಿ ಸಿದ್ಧರಾಮನ ಕರ್ಮಯೋಗ ವಿಲಾಸವನ್ನು ಕಣ್ಣಾರೆ ಕಂಡರಿಯಲು ಸೊನ್ನಲಿಗೆಗೆ ಬಂದನು. ಬಾಲ್ಯದಲ್ಲಿ ಅವನಿಗೆ ಮಹಾಮಹಾ ಪಂಡಿತರಿಂದ ಉತ್ತಮ ಶಿಕ್ಷಣ ಲಭಿಸಿತ್ತು. ಅವನು ಸಕಲ ಶಾಸ್ತ್ರ ಪುರಾಣ, ವೇದ, ಆಗಮಗಳಲ್ಲಿ ಪಾರಂಗತನಾಗಿದ್ದನು. ಪ್ರತಿಭಾವಂತ ಆತ್ಮಜ್ಞಾನಿ.

ಸಿದ್ಧರಾಮನೂ ಶಿವತತ್ತ್ವಜ್ಞಾನಿ; ಕರ್ಮಯೋಗಿ, ಅಲ್ಲಮ ಪ್ರಭುವಿನ ತತ್ತ್ವದರ್ಶವನ್ನು ಸಿದ್ಧರಾಮ ಕೇಳಿದ್ದನು. ಬಳ್ಳಿಗಾವಿಯ ಶೈವಕೇಂದ್ರದ ವಿಚಾರವನ್ನೂ ಅರಿತಿದ್ದನು. ರೇವಣಸಿದ್ಧ ಅಲ್ಲಮನ ಅನುಭಾವ ಸಿದ್ಧಿಯನ್ನು ಸಿದ್ಧರಾಮನಿಗೆ ಹೇಳಿದ್ದನು. ಅವರಿಬ್ಬರಿಗೂ ಪರಸ್ಪರ ಪರಿಚಯವಿರಲಿಲ್ಲ. ಇಂದು ಅಲ್ಲಮ-ಸಿದ್ಧರಾಮರ ಸಂದರ್ಶನ; ಹಿಮಗಿರಿ ಶ್ರೀಗಿರಿಗಳ ಸಮಾಗಮದಂತಾದೀತು! ಇದೊಂದು ಅಪೂರ್ವ ಸನ್ನಿವೇಶ! ಧಾರ್ಮಿಕ ಕ್ಷೇತ್ರದಲ್ಲಿ ಇಂಥ ಸನ್ನಿವೇಶಗಳು ತೀರ ವಿರಳ! ಬೆಳಗು ಬೆಳಗು ಸೇರಿ ಮಹಾಬೆಳಗಾದಂತೆ! ಸಿದ್ಧರಾಮನ ಕರ್ಮಯೋಗ ಅಲ್ಲಮನ ಶಿವಯೋಗದಲ್ಲಿ ಸೇರಬೇಕು! ಪರಮ ತತ್ತ್ವಾರ್ಥ ಪ್ರಕಾಶವೊಂದು ಹೊರಹೊಮ್ಮಬೇಕು. ಸಿದ್ಧರಾಮನ ಯೋಗಜೀವನ ಶ್ರೀಶೈಲದಲ್ಲಿ ರೂಪುಗೊಂಡರೆ, ಅಲ್ಲಮನ ಯೋಗ ಜೀವನ ಶ್ರೀಶೈಲದಲ್ಲಿ ಬಯಲಾಯಿತು. ಒಂದು ಅವರೋಹಣ; ಇನ್ನೊಂದು ಆರೋಹಣ! ಸಿದ್ಧರಾಮ ತತ್ತ್ವವಾಹಿನಿ ಗಿರಿಯಿಂದ ಧರೆಗಿಳಿದ ದೇವಗಂಗೆ! ಅಲ್ಲಮನ ತತ್ತ್ವವಾಹಿನಿ ಧರೆಯಿಂದ ಗಿರಿಯೇರಿದ ಸಿದ್ಧಗಂಗೆ! ಸಿದ್ಧರಾಮ ದೇವಜೀವನವನ್ನು ಮಾನವ ಜೀವನದಲ್ಲಿ ತುಂಬಿದ ಮಹಾಯೋಗಿ; ಅಲ್ಲಮ ಮಾನವಜೀವನವನ್ನು ದೇವ ಜೀವನದಲ್ಲಿ ಪೂರ್ಣಗೊಳಿಸಿದ ಆತ್ಮಜ್ಞಾನಿ! ಸಿದ್ಧರಾಮ ಮಾನವ ಲೋಕದ ಹಿತವನ್ನು ಬಯಸಿದ ಕರ್ಮಯೋಗಿ! ಅಲ್ಲಮ ನಿತ್ಯಜೀವನದ ಹಿತವನ್ನು ಅರಿಯದ ಜ್ಞಾನಯೋಗಿ! ಸಿದ್ಧರಾಮ ಪ್ರಕೃತಿಯಲ್ಲಿ ಪುರುಷೋತ್ತಮನನ್ನು ಕಂಡನು. ಅಲ್ಲಮ ಪುರುಷೋತ್ತಮನಲ್ಲಿ ಪ್ರಕೃತಿಯನ್ನು ಅರಿತನು! ಇಬ್ಬರೂ ಶಿವಯೋಗ ಶ್ರೀಗಿರಿಯಲ್ಲಿ ನಿಂತರು; ಆ ಪರಂಜ್ಯೋತಿಯಲ್ಲಿ ಬೆರೆತರು.



ಸಾಂದರ್ಭಿಕ

# ಪದ್ಮಶ್ರೀ ಡಾ. ಬಿ. ಶಿವಮೂರ್ತಿಶಾಸ್ತ್ರಿ - ಒಂದು ನೆನಪು

- ಡಾ. ಗೊ.ರು. ಚನ್ನಬಸಪ್ಪ *

ಇಲ್ಲಿಗೆ ೧೨ ವರ್ಷಗಳ ಹಿಂದೆ ನಾನು ತುಮಕೂರಿನಲ್ಲಿ ಒಂದು ಗ್ರಂಥವನ್ನು ಲೋಕಾರ್ಪಣೆಗೊಳಿಸಿದ್ದೆ. ಆ ಗ್ರಂಥವು ಕನ್ನಡ ನಾಡಿನ **'ಜಂಗಮ ವಿಶ್ವಕೋಶ'**ದಂತಿದ್ದ ಲಿಂ. ಪದ್ಮಶ್ರೀ ಡಾ. ಬಿ. ಶಿವಮೂರ್ತಿ ಶಾಸ್ತ್ರಿಗಳ ಬದುಕು ಮತ್ತು ಬರಹಗಳನ್ನು ಕುರಿತ ಒಂದು ಮಹಾಪ್ರಬಂಧದ ಸಂಕ್ಷಿಪ್ತ ರೂಪ. ಅದರ ಕರ್ತೃಗಳು: ಡಾ.ಬಿ.ಪಿ. ತೋಟದ; ಮೂಲ ಮಹಾಪ್ರಬಂಧದ ಮಾರ್ಗದರ್ಶಕರು: ನಾಡಿನ ಹಿರಿಯ ವಿದ್ವಾಂಸರಾದ ಡಾ. ಬಿ.ವಿ. ಶಿರೂರ ಅವರು.

ಇದೇ ದಿನಾಂಕ:೨೩.೦೨.೨೦೨೧ ಲಿಂ. ಶಿವಮೂರ್ತಿ ಶಾಸ್ತ್ರಿಗಳ ೧೧೮ನೆಯ ಜನ್ಮದಿನ. ಕರ್ನಾಟಕ ಏಕೀಕರಣಕ್ಕಾಗಿ, ಕನ್ನಡ ಭಾಷೆ ಮತ್ತು ಸಂಸ್ಕೃತಿಗಳ ಪ್ರಸಾರಕ್ಕಾಗಿ, ಬಸವ ಸಮಿತಿಯಂತಹ ಸಾರ್ವಭೌಮ ಸಂಸ್ಥೆಯ ಸ್ಥಾಪನೆಗಾಗಿ, ಬಸವ ಸಮಿತಿಗೆ ತಮ್ಮ ಇಡೀ ಗ್ರಂಥ ಭಂಡಾರವನ್ನೇ ನೀಡಿದ ದಾನಿಗಳಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಥಮ ಶರಣಧರ್ಮದ ಅಧ್ಯಕ್ಷರಾಗಿ ಅವರು ಸಲ್ಲಿಸಿದ ಬಹುಮುಖ ಸೇವೆಯ ಸ್ಮರಣೆಗಾಗಿ, ಬಸವ ಸಮಿತಿಯ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿ ಅವರು ಪ್ರಸ್ತಾಪಿತ ಗ್ರಂಥವನ್ನು ಪ್ರಕಟಿಸಿದ್ದಾರೆ. ಆ ಮೂಲಕ ಲಿಂಗೈಕ್ಯರಿಗೆ ಕೃತಜ್ಞತೆ ಸಲ್ಲಿಸಿದ್ದಾರೆ.

ಪಂ. ಶಿವಮೂರ್ತಿ ಶಾಸ್ತ್ರಿಗಳ ಬದುಕು-ಬರಹಗಳನ್ನು ಕುರಿತು ಸಂಶೋಧನೆ ಮಾಡಿರುವ ಡಾ. ತೋಟದ ಅವರು ತುಂಗಭದ್ರೆಯ ಆಚಿನವರಾದರೂ, ತುಂಗಭದ್ರೆಯೀಚೆಯ ವ್ಯಕ್ತಿಯೊಬ್ಬರನ್ನು ತಮ್ಮ ಅಧ್ಯಯನಕ್ಕೆ ಆರಿಸಿಕೊಂಡಿರುವುದೇ ಒಂದು ವಿಶೇಷ. ವಿಸ್ತಾರವಾದ ಶಾಸ್ತ್ರಿಗಳ ಬದುಕಿನ ತೋಟವನ್ನೆಲ್ಲ ಅಡ್ಡಾಡಿ, ಅಲ್ಲಿ ದೊರೆತ ಸಮೃದ್ಧ ಸಾಮಗ್ರಿಯನ್ನೆಲ್ಲ ಸಮರ್ಥವಾಗಿ ಬಳಸಿ ಉಪಯುಕ್ತ ದಾಖಲೆ ಮಾಡಿದ್ದಾರೆ. ಶಾಸ್ತ್ರಿಗಳು ಜನಿಸಿದ ಮತ್ತು ಸಮಾಧಿಸ್ಥರಾದ ತುಮಕೂರು ನೆಲದಲ್ಲೇ ಅವರನ್ನು ಕುರಿತ ಮಹಾಪ್ರಬಂಧ ಬಿಡುಗಡೆಯಾದದ್ದು ಒಂದು ಸ್ಮರಣೀಯ ಸಂಗತಿ.

ನನಗೆ ಪಂ. ಶಿವಮೂರ್ತಿ ಶಾಸ್ತ್ರಿಗಳ ಪರಿಚಯವಾದದ್ದು ೧೯೬೧ರಲ್ಲಿ. ಆಗ ಚಿಕ್ಕಮಗಳೂರು ಜಿಲ್ಲೆಯ ಗಿರಿಯಾಪುರದ ಹಾನಗಲ್ಲ ಕುಮಾರಶಿವಯೋಗಿ ಸ್ಮಾರಕ ಶಿವಾದ್ವೈತ ಪ್ರಚಾರ ಸಮಿತಿಯ ದ್ವಾದಶ ಮಹೋತ್ಸವ ಮತ್ತು ಆ ಸಮಿತಿಯ ಸ್ಥಾಪಕರಾದ ಪೂಜ್ಯ ಶ್ರೀ ಸದಾಶಿವ ಶಿವಾಚಾರ್ಯರ ಷಷ್ಟ್ಯಬ್ಧಿ ಮಹೋತ್ಸವ. ಪೂಜ್ಯ ಶ್ರೀಗಳಿಗೆ ಶಾಸ್ತ್ರಿಗಳ ನಿಕಟ ಪರಿಚಯವಿತ್ತು. ಅಂತೇ ಆ ಸಂದರ್ಭದಲ್ಲಿ ನಾವು ಪ್ರಕಟಿಸಿದ **'ವಿಭೂತಿ'** ಎಂಬ ನೆನಹಿನ ಗ್ರಂಥಕ್ಕೆ **"ಭಗವಾನ್ ತೋಂಟದಾರ್ಯರು ಬೋಳ ಬಸವೇಶ್ವರನಿಗೆ ಬೋಧಿಸಿದ ವೀರಶೈವ ಧರ್ಮ"** ಎಂಬ ಸಂಶೋಧನ ಲೇಖನವನ್ನು ನೀಡಿದ್ದರು. ಹಾಗೆಯೇ ೧೯೬೭ರಲ್ಲಿ ತರೀಕೆರೆಯಲ್ಲಿ ನಡೆದ ಅಖಿಲ ಕರ್ನಾಟಕ ಪ್ರಥಮ ಜನಪದ ಸಾಹಿತ್ಯ ಸಮ್ಮೇಳನದ ನೆನಪಿಗೆ ನಾನು ಸಂಪಾದಿಸಿ **'ಹೊನ್ನ ಬಿತ್ತೇವು ಹೊಲಕೆಲ್ಲ'** ಗ್ರಂಥಕ್ಕೂ **'ಜನಪದ ಸಾಹಿತ್ಯದಲ್ಲಿ ಮಾದೇಶ್ವರರು'** ಎಂಬ ಒಂದು ಸುಂದರ ಲೇಖನವನ್ನು ನೀಡಿದ್ದರು.

ನಮ್ಮ ಭಾಗದಲ್ಲಿ ಗ್ರಾಮಾಂತರ ಯುವಜನ ಪರಿಷತ್ತನ್ನು ಆರಂಭಿಸಲು ನಿರ್ಧರಿಸಿ, ಅವರೊಡನೆ ಬೆಳೆದ ಪರಿಚಯದಿಂದಾಗಿ, ಅದರ ಉದ್ಘಾಟನೆಗೆ ಪಂ. ಶಿವಮೂರ್ತಿ ಶಾಸ್ತ್ರಿಗಳನ್ನೇ ಕರೆಯಲು ನಾನು ಹೋದಾಗ, ಬೆಂಗಳೂರಿನ ರಂಗಸ್ವಾಮಿ ಗುಡಿಮನೆಯಲ್ಲಿ ನನ್ನನ್ನು ಪ್ರೀತಿ-ವಿಶ್ವಾಸಗಳಿಂದ ಕಂಡು, 'ಶರಣ ಸಾಹಿತ್ಯ' ಪತ್ರಿಕೆಗೆ ನನ್ನನ್ನು ಚಂದಾದಾರನನ್ನಾಗಿಯೂ ಮಾಡಿದರು.

ನನ್ನ ಬಿನ್ನಹದಂತೆ ನಮ್ಮಲ್ಲಿಗೆ ಗ್ರಾಮಾಂತರ ಯುವಜನ ಪರಿಷತ್ತಿನ ಉದ್ಘಾಟನೆಗೆ ಬಂದಿದ್ದ ಶಾಸ್ತ್ರಿಗಳು ತಮ್ಮ ಭಾಷಣವನ್ನು ಮುದ್ರಿಸಿಕೊಂಡು ಬಂದಿದ್ದರು. ನಾವು ಅವರಿಗೆ ಪ್ರಯಾಣವೆಚ್ಚವನ್ನು ಮಾತ್ರ ಕೊಟ್ಟಿದ್ದೆವು. ಅವರು

* # ೪೦೬, 'ಪ್ರಣಾಮ', ೩ನೇ ಕ್ರಾಸ್, 'ಎಫ್' ರಸ್ತೆ, ಐಡಿಯಲ್ ಹೋಮ್ಸ್ ಟೌನ್‌ಶಿಪ್
೨ನೇ ಹಂತ, ರಾಜರಾಜೇಶ್ವರಿನಗರ, ಬೆಂಗಳೂರು-೫೬೦೦೯೮







ಬೆಂಗಳೂರಿಗೆ ಹೋದ ನಂತರ ಮುದ್ರಣ ವೆಚ್ಚದ ೬ರೂ.ಗಳ ಬಿಲ್ ಕಳುಹಿಸಿದರು. ಅದಕ್ಕೆ ನಾನು ಉತ್ತರ ಬರೆದು, 'ನಾವೆಲ್ಲ ಹಳ್ಳಿಯವರು ನಿಮಗೆ ಪ್ರಯಾಣ ವೆಚ್ಚ ಕೊಟ್ಟಿದ್ದೇ ನಮಗೆ ಭಾರವಾಗಿದೆ. ನೀವು ನಿಮ್ಮ ಭಾಷಣವನ್ನು ಮುದ್ರಿಸಿಕೊಂಡು ಬರುತ್ತೀರೆಂದು ನಾವು ತಿಳಿದಿರಲಿಲ್ಲ. ನಮ್ಮ ಆರ್ಥಿಕ ಪರಿಸ್ಥಿತಿಯ ಬಗೆಗೆ ಅನುಕಂಪವಿರಲಿ. ಮುದ್ರಣ ವೆಚ್ಚವನ್ನು ಮನ್ನಾ ಮಾಡಿ' ಎಂದು ಕೋರಿಕೊಂಡಿದ್ದೆ. ಅದಕ್ಕೆ ಅವರು "ಚಿಂತೆಯಿಲ್ಲ. ನೀವೆಲ್ಲ ಸೇರಿ ಅಲ್ಲಿ ನನ್ನ ಕೀರ್ತನೆ ಏರ್ಪಡಿಸಿ, ಸಾಕು" ಎಂದು ತಿಳಿಸಿದರು. ಅವರ ಕೀರ್ತನೆ ಎಂದರೆ ನಮಗೆಲ್ಲ ಸಹಜ ಆಸಕ್ತಿ. ನಾವೆಲ್ಲ ಚಂದಾ ಹಾಕಿ ಕೀರ್ತನ ಕಾರ್ಯಕ್ರಮ ಏರ್ಪಡಿಸಿದೆವು. ಬಹುಶಃ ಅವರು ನಿರೀಕ್ಷಿಸಿದುದಕ್ಕಿಂತ ಸ್ವಲ್ಪ ಹೆಚ್ಚು ಸಂಭಾವನೆಯನ್ನು ನಾವು ನೀಡಿದಂತೆ ಕಾಣುತ್ತದೆ. ಅದಕ್ಕೆ ಅವರು ಹೇಳಿದ್ದು ತುಂಬ ಸ್ವಾರಸ್ಯಕರವಾಗಿದೆ: "ನಾನು ಹಿಂದೆ ಬಂದಿದ್ದಾಗ ನೀವು ಕೊಡಬೇಕಾಗಿದ್ದ ನನ್ನ ಮುದ್ರಣದ ಬಿಲ್ಲೂ ಬಂದಂತಾಯಿತು".

ಇಂತಹ ಸ್ವಾರಸ್ಯದ ಆದರೆ, ನಾಡು-ನುಡಿಗಳ ವಿಷಯದಲ್ಲಿ ಅಷ್ಟೇ ಗಂಭೀರ ಚಿಂತಕರಾದ ಪಂ. ಶಿವಮೂರ್ತಿ ಶಾಸ್ತ್ರಿಗಳ ಸಂಬಂಧ-ಸಂಪರ್ಕಗಳು ನನಗೆ ಇದ್ದುವೆಂಬುದೇ ಒಂದು ಅಭಿಮಾನದ ನೆನಪು.

ಪಂ. ಶಾಸ್ತ್ರಿಗಳ ಮತ್ತೊಂದು ವಿಶೇಷವೆಂದರೆ, ಅವರಿಗಿದ್ದ ಅದ್ಭುತ ನೆನಪಿನ ಶಕ್ತಿ! ಕನ್ನಡ ನಾಡಿನ ಚರಿತ್ರೆಗೆ ಸಂಬಂಧಿಸಿದ ಸಂಗತಿಗಳನ್ನು ಅವರು ಓತಪ್ರೋತವಾಗಿ ಉಲ್ಲೇಖಿಸುತ್ತಿದ್ದರು. ನಾಡಿನ ಒಳ-ಹೊರಗಿನ ಸಹಸ್ರಾರು ಹಳ್ಳಿಗಳು, ಮಠಗಳು ಮತ್ತು ವ್ಯಕ್ತಿಗಳ ಹೆಸರುಗಳೆಲ್ಲ ಅವರ ನೆನಪಿನ ಬುಟ್ಟಿಯಲ್ಲಿ ನೆಲೆಗೊಂಡಿದ್ದವು. ಏಕೀಕರಣ ಹೋರಾಟದ ಸಂದರ್ಭದಲ್ಲಿ ಕರ್ನಾಟಕದ ಭೌಗೋಳಿಕ ವ್ಯಾಪ್ತಿಯನ್ನು ಐತಿಹಾಸಿಕ ಆಧಾರದ ಮೇಲೆ ಹೇಳುತ್ತಿದ್ದರು. ೧೯೫೨ರ ಸುಮಾರಿರಬೇಕು. ಗಿರಿಯಾಪುರದಲ್ಲಿ ನಡೆದ ಕರ್ನಾಟಕ ಏಕೀಕರಣ ಸಮ್ಮೇಳನದಲ್ಲಿ ಸಿದ್ಧವನಹಳ್ಳಿ ನಿಜಲಿಂಗಪ್ಪ, ಗುದ್ಲೆಪ್ಪ ಹಳ್ಳಿಕೇರಿ, ಕೆ.ಟಿ. ಭಾಷ್ಯಂ, ದೊಡ್ಡ ಮೇಟಿ ಅಂದಾನಪ್ಪ, ಜೋಳದರಾಶಿ ದೊಡ್ಡನಗೌಡ ಮೊದಲಾದ ಅನೇಕ ಪ್ರಮುಖರು ಪಾಲುಗೊಂಡಿದ್ದರು. ಆ ಸಂದರ್ಭದಲ್ಲಿ ಪಂ. ಶಿವಮೂರ್ತಿ ಶಾಸ್ತ್ರಿಗಳು ಮಾಡಿದ ಭಾಷಣ ಏಕೀಕರಣ ಚಳವಳಿಗೆ ಒಂದು ಹೊಸ ಆಯಾಮವನ್ನೇ ನೀಡಿತೆಂದು ಹೇಳಬೇಕು.

ನಾನು ಮೊದಲೇ ಹೇಳಿದಂತೆ, ಪಂ. ಶಾಸ್ತ್ರಿ ಅವರದ್ದು ಬಹುಮುಖ ವ್ಯಕ್ತಿತ್ವ. ಸಾಹಿತ್ಯ, ಕೀರ್ತನ, ಪತ್ರಿಕೋದ್ಯಮ, ಸಮಾಜ ಸಂಘಟನೆ, ನಾಡಹಿತ ಹೀಗೆ ಅವರ ಸೇವಾ ವಿಸ್ತಾರ ವ್ಯಾಪಕವಾಗಿತ್ತು. ಅವರು ಕನ್ನಡ ನಾಡಿನಾದ್ಯಂತ ಗಾಳಿಯಂತೆ ಸಂಚರಿಸಿ, ಕನ್ನಡಿಗರಲ್ಲಿ ಕೆಚ್ಚು ತುಂಬಿದ ಒಂದು ಕ್ರಿಯಾಚೇತನವಾಗಿದ್ದರು.

ಪಂ. ಶಿವಮೂರ್ತಿ ಶಾಸ್ತ್ರಿಗಳು ತುಂಬಾ ಕಾರ್ಯಸಮರ್ಥರು. ಕಷ್ಟಸಹಿಷ್ಣುಗಳು. ತತ್ವಜ್ಞಾನಿ ಫೆಡ್ರಿಕ್ ಫೋರ್ಸಿಸ್ ಹೇಳುವಂತೆ, ಕ್ರೌರ್ಯ ವಿಲ್ಲದ ಸಾಮರ್ಥ್ಯ. ವಿನಾಶಕಾರಿಯಲ್ಲದ ಧೈರ್ಯ, ಭಾವನಾತ್ಮಕ ಮಾನವೀಯತೆ - ಈ ಮೂರೂ ಅವರಲ್ಲಿ ಮೈಗೂಡಿದ್ದವು. ಎಲ್ಲಕ್ಕಿಂತ ಮಿಗಿಲಾದುದು ಅವರ ಲೋಕಪ್ರಜ್ಞೆ.

ಶಾಸ್ತ್ರಿಗಳ ಸ್ವಾಭಿಮಾನ ಮತ್ತು ದೇಶಾಭಿಮಾನಗಳಿಗೆ ಒಂದು ನಿದರ್ಶನವಿದೆ: ಅವರು ಕ್ರಿಶ್ಚಿಯನ್ ಮಿಷಿನರಿ ಶಾಲೆಯೊಂದರಲ್ಲಿ ಶಿಕ್ಷಕರಾಗಿ ವೃತ್ತಿ ಆರಂಭಿಸಿದರು. ಆ ಶಾಲೆಯ ಮುಖ್ಯೋಪಾಧ್ಯಾಯ ರೆ. ಫಾದರ್ ಜೈನ್ ಎಂಬ ಆಂಗ್ಲ ವ್ಯಕ್ತಿ. ಅವರಿಗೆ ಶಾಸ್ತ್ರಿ ಅವರೇ ಕನ್ನಡ ಪಾಠವನ್ನು ಹೇಳಿಕೊಡುತ್ತಿದ್ದರು. ಶಾಸ್ತ್ರಿಗಳು ಶಾಲಾ ಮಾಸ್ತರರಾಗಿ ಗಾಂಧಿ ಟೋಪಿ ಧರಿಸುತ್ತಿದ್ದರು. ಅದನ್ನು ಗಮನಿಸಿದ ಆ ಮುಖ್ಯೋಪಾಧ್ಯಾಯ ಒಂದು ದಿನ ಶಾಸ್ತ್ರಿ ಅವರನ್ನು ಕರೆದು, 'ನಿನ್ನ ತಲೆ ಮೇಲಿರುವುದನ್ನು ತೆಗೆಯಬೇಕು' ಎಂದ. 'ಏಕೆ?' ಎಂದು ಕೇಳಿದರು ಶಾಸ್ತ್ರಿಗಳು. "ಅದು ಗಾಂಧಿ ಟೋಪಿ. ಗಾಂಧಿ ಬ್ರಿಟಿಷರ ಶತ್ರು. ನಮ್ಮನ್ನು ಇಲ್ಲಿಂದ ಓಡಿಸಲು ಆತ ಜನರನ್ನೆಲ್ಲ ಎತ್ತಿ ಕಟ್ಟುತ್ತಿದ್ದಾನೆ. ನೀನು ಆಂಗ್ಲ ಶಾಲೆಯ ನೌಕರ. ಇನ್ನು ಮೇಲೆ ಈ ಗಾಂಧಿ ಟೋಪಿ ಧರಿಸಕೂಡದು" ಎಂದ. ಅದಕ್ಕೆ ಶಾಸ್ತ್ರಿಗಳು, "ಫಾದರ್, ಇದು ಭಾರತ. ನಾವು ಭಾರತೀಯರು. ಈ ದೇಶ ಭಾರತೀಯರದು" ಎಂದರು. ಆಗ ಆ ಫಾದರ್ "ಇದೆಲ್ಲ ರಾಜಕೀಯ ಮಾಡಕೂಡದು. ನೀನು ನಮ್ಮಿಂದ ಸಂಬಳ ಪಡೆಯುವ ನೌಕರ. ನಾವು ಹೇಳಿದಂತೆ ಕೇಳಬೇಕಾದುದು ನಿನ್ನ ಕೆಲಸ" ಎಂದ. ಅದಕ್ಕೆ ಶಾಸ್ತ್ರಿಗಳು "ನಾನು ನಿಮ್ಮಿಂದ ಏನೂ ಕಲಿಯಬೇಕಾಗಿಲ್ಲ" ಎಂದಾಗ, ಆತ "ಏನಿದು? ನಿನ್ನ ಉದ್ಧಟತನ! ಇದರ ಪರಿಣಾಮ ಏನಾಗುತ್ತದೆ ಗೊತ್ತಾ?" ಎಂದು ಕೇಳಿದ. ಶಾಸ್ತ್ರಿಗಳು "ಏನಾಗುತ್ತೆ? ಗುರು-ಶಿಷ್ಯ ಸಂಬಂಧ ಹಾಳಾಗುತ್ತೆ. ನಾನು ನಿಮಗೆ ಕನ್ನಡ ಪಾಠ ಹೇಳಿಕೊಡುತ್ತಿರುವವನು. ನಾನಿಲ್ಲಿ ಶಿಕ್ಷಕ ವೃತ್ತಿಯಲ್ಲಿದ್ದರೂ, ನನ್ನ ವೇಷ ಭೂಷಣದ ಮೇಲೆ ನಿಮಗೆ ಅಧಿಕಾರವಿಲ್ಲ" ಎಂದರು. ಅದಕ್ಕೆ ಆ ಮುಖ್ಯೋಪಾಧ್ಯಾಯ "ಇದು ನಿಮ್ಮ ಅವಿವೇಕ. ಹೀಗೆ ಟೋಪಿಯನ್ನು ಸ್ಮರಿಸುವುದಾದರೆ, ನಾಳೆಯಿಂದ ಇಲ್ಲಿ ನಿಮಗೆ ಪ್ರವೇಶವಿಲ್ಲ" ಎಂದ. ಆಗ ಶಾಸ್ತ್ರಿ ಅವರು "ನಾಳೆ ಏಕೆ? ಇಗೋ ಈಗಲೇ ತೆಗೆದುಕೊಳ್ಳಿ" ಎಂದು ಹೇಳಿ ರಾಜಿನಾಮೆ ಪತ್ರ ಬರೆದುಕೊಟ್ಟು ಆ ಸ್ಥಳವನ್ನು ಬಿಟ್ಟು ಹೋದರು.







ಕೈಲಿದ್ದ ಉದ್ಯೋಗ ಹೋದರೂ ಅಂಜಲಿಲ್ಲ. ಅವರಿಗೆ ಸ್ವಂತಕ್ಕಿಂತ ದೇಶಾಭಿಮಾನ ದೊಡ್ಡದಾಗಿತ್ತು. ಮುಂದೆ ಅವರು ಬೆಂಗಳೂರಿಗೆ ಹೋದರು. ಆಜನ್ಮ ಪ್ರತಿಭೆಯಿತ್ತು. ಕೀರ್ತನದ ಕಲೆ ಕೈಹಿಡಿಯಿತು. ಆ ಕಲೆಯಿಂದಲೇ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡರು. ಇಡೀ ನಾಡಿಗೆಲ್ಲ ಬೇಕಾದವರಾದರು.

ಯಾರನ್ನಾದರೂ, ಅವರ ಮನವೊಲಿಸಿ ಗುರಿಸಾಧಿಸುವ ವಿಶಿಷ್ಟ ಕಲೆ ಅವರದು. ಆ ಕಲೆಯನ್ನು ಸ್ವಹಿತಕ್ಕಾಗಿ ಬಳಸಿಕೊಂಡದ್ದಕ್ಕಿಂತ, ಕನ್ನಡ ಸಾಹಿತ್ಯ ಪರಿಷತ್ತು, ಬಸವ ಸಮಿತಿಯಂತಹ ಸಾರ್ವಜನಿಕ ಸಂಸ್ಥೆ ಗಳಿಗೆ ಬಳಸಿಕೊಂಡದ್ದೇ ಹೆಚ್ಚು. ಸ್ಥೂಲ ದೇಹವಾದರೂ ಸದಾ ಲವಲವಿಕೆಯಿಂದ ಓಡಾಡಿಕೊಂಡು ಕನ್ನಡ ನಾಡು-ನುಡಿಗಳ ಸೇವೆ ಸಲ್ಲಿಸಿದ ಪದ್ಮಶ್ರೀ ಡಾ. ಬಿ. ಶಿವಮೂರ್ತಿ ಶಾಸ್ತ್ರಿಗಳು 'ಶರಣ ಸಾಹಿತ್ಯ' ಪತ್ರಿಕೆಯನ್ನು ತಮ್ಮ ಮಗುವಿನಂತೆ ಸುಮಾರು ೩೫ ವರ್ಷಗಳ ಕಾಲ ಸಾಕಿದ್ದರು.

ಆರಂಭದಲ್ಲಿ ನಾನು ಪ್ರಸ್ತಾಪಿಸಿದ ಮಹಾಪ್ರಬಂಧ ದಲ್ಲಿ ಡಾ. ಬಿ.ಪಿ. ತೋಟದ ಅವರು ಪಂ. ಶಾಸ್ತ್ರಿಗಳ ಜನನ, ಬಾಲ್ಯ, ಯೌವ್ವನ, ವಿದ್ಯಾಭ್ಯಾಸ, ಶಿಕ್ಷಕ ವೃತ್ತಿ, ತರಬೇತಿ, ಕೌಟುಂಬಿಕ ಜೀವನ, ನಾಡ ಸಂಚಾರ, ಪತ್ರಿಕೋದ್ಯಮ, ಏಕೀಕರಣ ಹೋರಾಟ, ಸ್ವಾತಂತ್ರ್ಯ ಹೋರಾಟ, ಹಸ್ತಪ್ರತಿ ಸಂಗ್ರಹ, ಗ್ರಂಥ ಸಂಪಾದನೆ, ಸಂಶೋಧನೆ, ಪ್ರಕಟಣೆ, ಸಮಾಜ ಸೇವೆ, ಶರಣ ಧರ್ಮ ಮತ್ತು ಸಾಹಿತ್ಯ ಪ್ರಸಾರ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆ - ಹೀಗೆ ಅವರ ೭೩ ವರ್ಷಗಳ ಅರ್ಥಪೂರ್ಣ ಬದುಕನ್ನು ದಾಖಲಿಸಿ ಒಳ್ಳೆಯ ಉಪಕಾರ ಮಾಡಿದ್ದಾರೆ.

ಕನ್ನಡ ನಾಡಿನ ಇತಿಹಾಸದಲ್ಲಿ ಪದ್ಮಶ್ರೀ ಡಾ. ಬಿ. ಶಿವಮೂರ್ತಿಶಾಸ್ತ್ರಿ ಒಂದು ಮರೆಯಲಾಗದ, ಮರೆಯಬಾರದ ಹೆಸರು.

## ಶರಣಾಂಜಲಿ



### ಶ್ರೀ ಬಿ. ಪರಮಶಿವಯ್ಯನವರು

ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯಲ್ಲಿ ದೈಹಿಕ ಶಿಕ್ಷಣ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಬಿ. ಪರಮಶಿವಯ್ಯನವರು ದಿನಾಂಕ ೨೪-೦೧-೨೦೨೧ ರಂದು ಭಾನುವಾರ ತಮ್ಮ ೬೦ನೇ ವಯಸ್ಸಿನಲ್ಲಿ ಹೃದಯಾಘಾತದಿಂದ ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ.

ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು ಕುದೂರು ಹೋಬಳಿ, ಗುಂಡಿಗೆರೆ ಗ್ರಾಮದ ಶರಣ ಸಂಪ್ರದಾಯಸ್ಥ ಕುಟುಂಬದ ಕೃಷಿಕ ಕುಟುಂಬದಲ್ಲಿ ಜನಿಸಿದ್ದ ಇವರು ೧೯೮೨ರಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯಲ್ಲಿ ಶಿಕ್ಷಕ ವೃತ್ತಿ ಆರಂಭಿಸಿದರು. ಇದೇ ವರ್ಷ ೨೦೨೧ರ ಮಾರ್ಚ್ ತಿಂಗಳಲ್ಲಿ ನಿವೃತ್ತರಾಗಬೇಕಿತ್ತು. ಮೃತರು ಪತ್ನಿ, ಇಬ್ಬರು ಪುತ್ರಿಯರನ್ನು ಹಾಗೂ ಅಪಾರ ಬಂಧು-ಬಳಗದವರನ್ನು ಅಗಲಿದ್ದಾರೆ. ಶ್ರೀಮಠದ ಸೇವಾ ಕಾರ್ಯಗಳಲ್ಲಿ ಸಕ್ರಿಯವಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀಯುತರ ಅಗಲಿಕೆಯ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗದವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.




## ಶರಣಾಂಜಲಿ



**ಶ್ರೀ ನಂಜುಂಡಾರಾಧ್ಯರು**

ಶ್ರೀಮಠದ ಹಳೆಯ ವಿದ್ಯಾರ್ಥಿಯಾಗಿದ್ದ ಶ್ರೀ ನಂಜುಂಡಾರಾಧ್ಯರು ದಿನಾಂಕ ೦೮-೦೧-೨೦೨೧ ರಂದು ತಮ್ಮ ೭೮ನೇ ವಯಸ್ಸಿನಲ್ಲಿ ಏಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಇವರು ಕೆ.ಇ.ಬಿ. ಯಲ್ಲಿ ಅಭಿಯಂತರರಾಗಿ ಸೇವೆ ಸಲ್ಲಿಸಿದ್ದು, ಅನೇಕ ಸಂಘ ಸಂಸ್ಥೆಗಳಲ್ಲಿ ಸಮಾಜಮುಖಿ ಕೆಲಸ ಮಾಡಿದ್ದರು. ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸಮಾರಂಭದಲ್ಲಿ ಬಸವೇಶ್ವರ ಸೇವಾ ಸಂಘ ಎಂಬ ನಾಮಫಲಕದಡಿಯಲ್ಲಿ ಶ್ರೀಮಠಕ್ಕೆ ಬಂದಂತಹ ಭಕ್ತಾದಿಗಳಿಗೆ ಶುದ್ಧ ಕುಡಿಯುವ ನೀರು, ಮಜ್ಜಿಗೆ ಸೇವೆ ವ್ಯವಸ್ಥೆಯನ್ನು ಮಾಡಿದ್ದರು. ಶ್ರೀಗಳವರಿಂದ ಸಾಮೂಹಿಕ ಪ್ರಾರ್ಥನೆಯಲ್ಲಿ ವೈಯಕ್ತಿಕ ಪ್ರಶಂಸೆಗೆ ಪಾತ್ರರಾಗಿ ಧನ್ಯತೆಯನ್ನು ಪಡೆದಿದ್ದರು. ಮೃತರ ಆತ್ಮಕ್ಕೆ ಚಿರಶಾಂತಿ ಕೋರುತ್ತಾ, ಅವರ ಕುಟುಂಬಕ್ಕೆ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

## 'ಕರುನಾಡ ಕಣ್ಮಣಿ'

ಸಿದ್ಧಗಂಗಾ ತಪೋಭೂಮಿಕೆ ನೆನೆನೆದು
ಶತಾಯುಷಿ ಗುರುವಿಗೆ ಶರಣೆಂದು ।
ದುಃಖತಪ್ತ ಕರುನಾಡು ಅಶ್ರುತರ್ಪಣದಿ
ಕಂಗಾಲಾಗಿದೆ ಶ್ರೀ ಗುರುವಿನಗಲಿಕೆಗೆ ॥

ಜ್ಞಾನಗಂಗೆ ಹರಿಸಿದ ಕಾಯಕಯೋಗಿ
ಆಚಾರ ಧರ್ಮದಾತಗೆ ಶಿರಬಾಗಿ ।
ಜನ ಉದ್ಧರಿಸಿದೆ ಜನಿಸಿ ಬಾ ಮತ್ತೊಮ್ಮೆ
ಕರ್ನಾಟಕ ಕೀರ್ತಿಧ್ವಜವೆ ಮಗದೊಮ್ಮೆ ॥

ಸಿದ್ಧಲಿಂಗೇಶ್ವರ ಸನ್ನಿಧಿಯ ಬೆಳಕಾಗಿ
ನೀತಿನೆಲೆಯ ಸ್ಫೂರ್ತಿಯ ಗಣಿಯಾಗಿ ।
ಇನ್ನೊಮ್ಮೆ ಬಾ ಚೇತನ ಕಿರಣವಾಗಿ
ಭೇದ ಭಾವಗಳಳಿಸೊ ಶರಣರಾಗಿ ॥

ಮಾನವೀಯ ಮೌಲ್ಯಗಳ ಬಿತ್ತಿದ ಖ್ಯಾತಿ
ಕರುನಾಡ ಕಣ್ಮಣಿ ಬಾ ಬಸವಜ್ಯೋತಿ ।
ಜ್ಯೋತಿಯಲ್ಲೊದಗಿದ ಜ್ಯೋತಿಯಾಗಿ ಬಾ
ಶಿವಾನುಭವ ಧಾರೆಯ ಸ್ಫೂರ್ತಿಯೆ ಬಾ ॥

ಜನಿಸಿ ಬಾ ಗುರುವೆ ಚೇತನದ ಚಿಮ್ಮಿಸು
ಮರಳಿ ಬಾ ಪ್ರಭುಧರ್ಮ ಪ್ರತಿಬಿಂಬಿಸು ।
ದಾರ್ಶನಿಕ ತತ್ತ್ವಧ್ವನಿಯೆತ್ತಿ ಹೊಮ್ಮಿಸು
ನಾಡುನುಡಿ ಪ್ರೀತಿಗೆ ಭಾವೈಕ್ಯತೆ ಬಿಂಬಿಸು ॥

ಶ್ರೀಗುರುಪೀಠ ಸಂಸ್ಕಾರ ಸಂರಕ್ಷಿಸು
ಶಿವೋಪಾಸನೆ ಸದ್ಭಾವ ಪ್ರತಿರೂಪಿಸು ।
ಆಧ್ಯಾತ್ಮ ಸೃಷ್ಟಿಯ ಚೇತನ ಮರುಸೃಷ್ಟಿಸು
ಕ್ಷೇತ್ರವಿದ ಭಕ್ತಿಸಂಕುಲ ಜ್ಯೋತಿಯಾಗಿಸು ॥

**ಜಿ.ಬಿ. ಲಿಂಗರಾಜು**
**ನಿವೃತ್ತ ಉಪನ್ಯಾಸಕ, ಸುಬ್ರಹ್ಮಣ್ಯನಗರ,**
**ಅರಸೀಕೆರೆ-೫೭೩೧೦೩**






**ಅಭಿನಂದನೆ**

# ಅಖಿಲ ಭಾರತ ೮೬ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಪದ್ಮಶ್ರೀ ಪ್ರೊ. ದೊಡ್ಡರಂಗೇಗೌಡರು



ಹಾವೇರಿಯಲ್ಲಿ ನಡೆಯಲಿರುವ ೮೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಹಿರಿಯ ಕವಿ, ಸಾಹಿತಿ ಡಾ. ದೊಡ್ಡರಂಗೇಗೌಡರನ್ನು ಸರ್ವಾನುಮತದಿಂದ ಆಯ್ಕೆಯಾಗಿರುವುದಕ್ಕೆ ಸಿದ್ಧಗಂಗಾ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ತುಮಕೂರು ಜಿಲ್ಲೆ ಮಧುಗಿರಿ ತಾಲ್ಲೂಕು ಕುರುಬರಹಳ್ಳಿಯಲ್ಲಿ ಫೆಬ್ರವರಿ ೭, ೧೯೪೬ ರಲ್ಲಿ ಕೆ. ರಂಗೇಗೌಡ ಮತ್ತು ಶ್ರೀಮತಿ ಅಕ್ಕಮ್ಮ ದಂಪತಿಗಳಿಗೆ ಪುತ್ರರಾಗಿ ಜನಿಸಿದರು.

ಡಾ. ದೊಡ್ಡರಂಗೇಗೌಡರು ಬಹುಮುಖ ಪ್ರತಿಭೆಯ ವಿದ್ವನ್ಮಣಿಗಳು. ವೃತ್ತಿಯಿಂದ ಅಧ್ಯಾಪಕರಾದರೂ, ಪ್ರವೃತ್ತಿಯಿಂದ ಕವಿಯಾಗಿ, ಲೇಖಕರಾಗಿ, ವಿಮರ್ಶಕರಾಗಿ, ಚಿತ್ರಗೀತೆಗಳ ರಚನೆಕಾರರಾಗಿ, ಸ್ವರ ಸಂಯೋಜಕರಾಗಿ, ಗಾಯಕರಾಗಿ, ಪತ್ರಿಕಾ ಅಂಕಣಕಾರರಾಗಿ, ಜಾನಪದ ತಜ್ಞರಾಗಿ ಅಪಾರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಸರಳ ಸಜ್ಜನಿಕೆಗೆ ಮತ್ತೊಂದು ಹೆಸರು ಕವಿ ದೊಡ್ಡರಂಗೇಗೌಡರು. ಹಿಂದುಳಿದ ಹಳ್ಳಿಗಾಡಿನಲ್ಲಿ ಹುಟ್ಟಿ ಬಡತನವನ್ನು ಬೆನ್ನಿಗೆ ಕಟ್ಟಿಕೊಂಡು ಬೆಂಗಳೂರಿಗೆ ಬಂದವರು. ತೀವ್ರ ಆರ್ಥಿಕ ಮುಗ್ಗಟ್ಟಿನಿಂದ ಓದಿಗೆ ತೊಂದರೆಯಾದರೂ ಸಹ ಓದಲೇಬೇಕೆಂಬ ಹಠದಿಂದ ಅಂಚೆ ಕಛೇರಿಯಲ್ಲಿ ತಾತ್ಕಾಲಿಕ ಹುದ್ದೆಗೆ ಸೇರಿ ಅಲ್ಲಿ ಹಗಲೂ-ರಾತ್ರಿ ಕೆಲಸ ಮಾಡಿ ಸ್ವಸಾಮರ್ಥ್ಯದಿಂದ ಉನ್ನತ ಮಟ್ಟದ ವಿದ್ಯಾಭ್ಯಾಸವನ್ನು ಮುಗಿಸಿದರು. ಗುಮಾಸ್ತನಿಂದ ಕಾಲೇಜು ಪ್ರಾಚಾರ್ಯರವರೆಗೆ ಏರಿದ ದೊಡ್ಡರಂಗೇಗೌಡರು ನಡೆದು ಬಂದ ಹಾದಿ ನಿಜಕ್ಕೂ ರೋಚಕವಾದುದು.

ಜಾನಪದ ಕ್ಷೇತ್ರಕ್ಕೆ ದೊಡ್ಡರಂಗೇಗೌಡರ ಕೊಡುಗೆ ವಿಶಿಷ್ಟವಾದುದು. ಚಲನಚಿತ್ರಗಳಿಗೆ ಹಾಡುಗಳನ್ನು ಬರೆಯುವುದರ ಮೂಲಕ ಪ್ರಸಿದ್ಧರಾದರು. ಸುಮಾರು ಮೂವತ್ತು ವರ್ಷಗಳಿಗೂ ಹೆಚ್ಚು ಕಾಲ ಅವರು ಬರೆದ ಚಿತ್ರರಂಗದ ಗೀತೆಗಳು ಚಿತ್ರರಸಿಕರ ಮನಸ್ಸನ್ನು ಸೂರೆಗೊಂಡಿವೆ. ಅವರಿಗೆ ಶಾಶ್ವತ ಕೀರ್ತಿಯನ್ನು, ಪ್ರತಿಷ್ಠೆಯನ್ನು ತಂದುಕೊಟ್ಟಿವೆ. ಜನತೆಯ ನಾಲಿಗೆಯ ಮೇಲೆ ನಿರಂತರವಾಗಿ ನಲಿದಾಡುತ್ತಿದೆ. ಕವಿತ್ವದ ಜೊತೆಗೆ ದೊಡ್ಡರಂಗೇಗೌಡರಲ್ಲಿ ಎದ್ದು ಕಾಣುವ ಪ್ರಮುಖ ಅಂಶಗಳೆಂದರೆ ಸಂಶೋಧಕ ಪ್ರವೃತ್ತಿ ಹಾಗೂ ವಿಮರ್ಶನ ಪ್ರಜ್ಞೆ, ಅವರ ಮಹಾಪ್ರಬಂಧ **'ಕನ್ನಡ ನವೋದಯ ಕಾವ್ಯ - ಒಂದು ಪುನರ್ ಮೌಲ್ಯಮಾಪನ'**, ಅವರ ಸಾಹಿತ್ಯ ಕೃತಿಗಳಲ್ಲಿ ವಿಶೇಷ ಸ್ಥಾನವನ್ನು ಪಡೆದುಕೊಳ್ಳುವ ಕೃತಿಯಾಗಿದೆ.

ಜೀವನ ಪ್ರೀತಿಯ ಕವಿ ದೊಡ್ಡರಂಗೇಗೌಡರು ನಿಸರ್ಗದಿಂದ ಕಾವ್ಯ ಸಂಪತ್ತನ್ನು ಗಳಿಸಿಕೊಂಡವರು. ಇವರ ಕಾವ್ಯದಲ್ಲಿ ನೇಸರು ನಗುತ್ತಾನೆ, ಹಕ್ಕಿಗಳು ಹಾಡುತ್ತಿವೆ, ಗಿಡ ಮರಗಳು ತೂಗಿ ಬಾಗುತ್ತವೆ, ಮಾವು ಬೇವುಗಳು ಲಾಲಿ ಹಾಡುತ್ತವೆ. ಮುಂಜಾನೆ ಬೆಳಕಿನ ಬಾಗಿಲು ತೆರೆಯುತ್ತದೆ. ಬಾವಿಯ ಕಪ್ಪೆ ಮದ್ದಳೆ ಬಾರಿಸುತ್ತದೆ. ಮೋಡಗಳು ಆಕಾಶದಲ್ಲಿ ಕೋಟೆ ಕಟ್ಟುತ್ತವೆ.

ಬದುಕಿನ ಬೆರಗು, ಬೆಡಗು, ಪ್ರೀತಿ, ಸೌಂದರ್ಯಗಳಿಗೆ ತನ್ನ ಕಾವ್ಯ ಶಕ್ತಿಯನ್ನು ಸೀಮಿತಗೊಳಿಸದ ಈ ಕವಿ ಹಸಿರು, ಅಸೂಯೆ, ದರ್ಪ, ಕ್ರೌರ್ಯ, ದಬ್ಬಾಳಿಕೆಗಳಿಂದ ಬದುಕು ಅಸಹನೀಯವಾಗುವುದನ್ನು ಕಾಣಿಸುವ ಕವಿತೆಗಳೂ ಇವರ ಹೃದಯದಿಂದ ಹರಿದು ಬಂದಿವೆ.

ಡಾ. ದೊಡ್ಡರಂಗೇಗೌಡರು ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಪರಮಪೂಜ್ಯರನ್ನು ಕುರಿತು ಕವನ-ಲೇಖನಗಳನ್ನು ಬರೆಯುವುದರ ಮೂಲಕ ನುಡಿನಮನ ಸಲ್ಲಿಸಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು.

ಲೇಖನ

# ವಿಶ್ವಮಾನವೀಯ ಪ್ರಜ್ಞೆ ಮತ್ತು ಬಸವಣ್ಣನವರು

– ಯೋಗೀಶ್ ನಿರ್ವಿಕಲ್ಪ *

**ದಯೆಯಿಲ್ಲದ ಧರ್ಮವದೇವುದಯ್ಯಾ?**
**ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ**
**ದಯವೇ ಧರ್ಮದ ಮೂಲವಯ್ಯಾ!**
**ಕೂಡಲಸಂಗಮದೇವನಂತಲ್ಲದೊಲ್ಲನಯ್ಯಾ!**

'ದಯೆಯೆನ್ನುವುದು ಧರ್ಮದ ಜೀವಾಳ! ದಯೆ, ಕರುಣೆ ಮತ್ತು ಭ್ರಾತೃತ್ವ ತತ್ತ್ವಗಳಿಲ್ಲದ ಧರ್ಮ ಎಂದಿಗೂ ನಿಜಾರ್ಥದಲ್ಲಿ ಧರ್ಮವೆನಿಸಿಕೊಳ್ಳಲು ಸಾಧ್ಯವಿಲ್ಲ. ದಯಾಪರತೆಯುಳ್ಳ ಧರ್ಮ ಎಂದಿಗೂ ಹಿಂಸೆಯನ್ನು ಬೋಧಿಸುವುದಿಲ್ಲ. ಧರ್ಮವೆಂಬುವುದು ಸಕಲ ಜೀವಾತ್ಮರಿಗೂ ಲೇಸು ಬಯಸುವ ಅಹಿಂಸಾ ತತ್ಪರತೆಯ ತತ್ತ್ವಸಾರವುಳ್ಳದ್ದಾಗಿರುತ್ತದೆ. ದಯಾಪರವುಳ್ಳ ವ್ಯಕ್ತಿಯೇ ಧರ್ಮ ಬಂಧು ಎನಿಸಿಕೊಳ್ಳಲು ಸಾಧ್ಯ' ಎಂದು ಧರ್ಮದ ವಿಸ್ತೃತ ವ್ಯಾಖ್ಯಾನಾರ್ಥವನ್ನು ವಿಶ್ವಕ್ಕೆ ನೀಡಿದ ಶ್ರೇಷ್ಠ ಮಾನವೀಯತೆಯ ತತ್ತ್ವ ಸಾರಿದವರು ಬಸವಣ್ಣನವರು.

ಇಡೀ ವಿಶ್ವವೇ ಭಗವಂತನ ಮಹಾಮನೆಯಿದ್ದಂತೆ! ಇಲ್ಲಿ ಬದುಕುತ್ತಿರುವ ನಾವೆಲ್ಲಾ ಆತನ ಮಕ್ಕಳಿದ್ದಂತೆ. ಹಾಗೂ ಸಕಲ ಜೀವಾತ್ಮರಿಗೂ ಲೇಸು ಬಯಸುವವನೇ ವಿಶ್ವಪ್ರಜ್ಞೆಯ ವಿಶ್ವ ಮಾನವನೆನಿಸಿಕೊಳ್ಳುತ್ತಾನೆ ಎನ್ನುವಂತಹ ಉದಾತ್ತ ಚಿಂತನೆಯ ಸಂದೇಶಗಳನ್ನು ಜಗತ್ತಿಗೆ ನೀಡಿದ ಬಸವಣ್ಣನವರು ವಿಶ್ವದ ಶ್ರೇಷ್ಠ ಅನುಭಾವಿ. ವಿಶ್ವಸಂಸ್ಥೆಯ ಧ್ಯೇಯೋದ್ದೇಶಗಳ ಮುಖ್ಯ ಆಶಯಗಳನ್ನು ಅಂದಿನ ದಿನಗಳಲ್ಲಿಯೇ ವ್ಯಾಖ್ಯಾನಿಸಿದ್ದು, ಅವರ ದೂರದರ್ಶಿ ವ್ಯಕ್ತಿತ್ವಕ್ಕೊಂದು ಸಾಕ್ಷಿ ಎನಿಸಿಕೊಂಡಿದೆ. ವಿಶ್ವಕಂಡ ಶ್ರೇಷ್ಠ ಸಮಾಜ ಸುಧಾರಕನೆನಿಸಿಕೊಂಡಿದ್ದ ಅವರಿಗೆ ವಿಶ್ವಕಲ್ಯಾಣ ಕುರಿತು ವಿಶ್ವ ಪ್ರಜ್ಞೆಯ ಪರಿಕಲ್ಪನೆಗಳಿಗೆ ಮುನ್ನುಡಿ ಬರೆದ ಶ್ರೇಷ್ಠತೆ ಸಲ್ಲುತ್ತದೆ.

ಸಾಮಾನ್ಯವಾಗಿ ಜಗತ್ತನ್ನು ಬಹುದೊಡ್ಡದಾಗಿ ಕಾಡುವ ಸಮಸ್ಯೆಗಳೆಂದರೆ ಹಸಿವು, ಬಡತನ, ಅನಕ್ಷರತೆ ಅಥವಾ ನಿರುದ್ಯೋಗವೆಂದು ನಾವು ಭಾವಿಸಿದ್ದೇವೆ. ಬಸವಣ್ಣನವರ ದೃಷ್ಟಿಯಲ್ಲಿ ಅವುಗಳಾವುವು ಸಮಸ್ಯೆಯೇ ಅಲ್ಲ! ಯಥಾರ್ಥವಾಗಿ ಸಮಸ್ಯೆಯಿರುವುದು ಪ್ರಾಮಾಣಿಕತೆಯ ಕೊರತೆಯಲ್ಲಿ ಎನ್ನುವ ವಿಭಿನ್ನ ರೀತಿಯ ಚಿಂತನೆ ಅವರದ್ದು. ಗುರು ಬಸವಣ್ಣನವರು ಹೇಳುವ ಹಾಗೆ ಪ್ರಸ್ತುತ ಜಗತ್ತಿನ ನೂರಾರು ಸಮಸ್ಯೆಗಳಿಗೆ ಮೂಲ ಕಾರಣ ಪ್ರಾಮಾಣಿಕತೆಯ ಕೊರತೆಯೇ ಎಂಬುದು ನಿರ್ವಿವಾದ ಸಂಗತಿ. ಸಮಸ್ಯೆಯ ಮೂಲ ಕಾರಣವನ್ನು ಕಂಡುಕೊಂಡು ಅದಕ್ಕೆ ಶಾಶ್ವತ ಪರಿಹಾರದ ಸೂತ್ರ ಸೂಚಿಸುವ ವಿಭಿನ್ನ ಚಿಂತನೆಯ ನೋಟವನ್ನು ಗುರು ಬಸವಣ್ಣನವರ ವಚನ ಸಂದೇಶಗಳಲ್ಲಿ ನಾವು ಕಾಣಬಹುದು.

ಒಂದು ಕ್ಷಣಕಾಲ ನಾವು ಈ ಜಗತ್ತನ್ನು ಅವಲೋಕಿಸಿದರೆ ಬಸವಣ್ಣನವರ ನುಡಿಗಳೆಷ್ಟು ಸತ್ಯ ಮತ್ತು ಅರ್ಥಪೂರ್ಣವೆಂದೆನ್ನಿಸುತ್ತದೆ. ವ್ಯಕ್ತಿ ವ್ಯಕ್ತಿಯ ನಡುವೆ ಪರಸ್ಪರ ಪ್ರಾಮಾಣಿಕವಾದ ನಂಬಿಕೆ ಮತ್ತು ವಿಶ್ವಾಸಗಳಿಲ್ಲದಿರುವುದು. ರಾಜ್ಯ ರಾಜ್ಯಗಳ ನಡುವೆ ವಿರಸ ಹಾಗೇ ದೇಶ ದೇಶಗಳ ನಡುವೆ ಸ್ನೇಹ ಸೇತುವಿನ ಸಂಬಂಧದ ಬಾಂಧವ್ಯದ ಕೊರತೆಯೇ ಇಂದು ವಿಶ್ವಕಲ್ಯಾಣದ ಸಾಮರಸ್ಯಕ್ಕೆ ಕಳಂಕ ತರುತ್ತದೆ. ಇಂದು ಕಾಡುತ್ತಿರುವ ಕೊರೊನಾದಂತಹ ವಿಶ್ವದ ಪ್ರಬಲ ಆತಂಕವನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು. ಇಂದು ವಿಶ್ವವನ್ನೇ ತಲ್ಲಣಗೊಳಿಸಿರುವ, ಮಾನವನ ಬದುಕಿನ ನೂರಾರು ವರ್ಷಗಳ ಆವಿಷ್ಕಾರ ಮತ್ತು ಸಾಧನೆಗಳೆಲ್ಲವನ್ನೂ ಮಣ್ಣಾಗಿಸಿರುವುದು 'ಕರೋನಾ' ವೆಂಬುದು ಒಂದು ವಿಷಾಣು. ಈ ವಿಷಾಣು ಮಾನವನ ವಿಕೃತ ಮನಸ್ಸಿನ ಸೃಷ್ಟಿಯೋ ಅಥವಾ ಪ್ರಾಕೃತಿಕವಾಗಿ ಸೃಷ್ಟಿಗೊಂಡ ವಿಷಾಣುವೋ ಎಂಬುದನ್ನು ವಿಮರ್ಶಿಸುವ ಸಮಯ ಇದಲ್ಲ ಎನಿಸಿದರೂ ಅದು ಮಾನವ ಜನಾಂಗಕ್ಕೆ ಕಲಿಸಿದ ಜೀವನ ಪಾಠದೊಡ್ಡದು. ಯಾವ ಕಾಲಕ್ಕೂ, ಯಾರೂ ಇದನ್ನು ಮರೆಯಲು ಸಹಾ ಸಾಧ್ಯವಿಲ್ಲ.

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-೫೭೭೨೦೧



**ಕಾಣಿಯ ಲೋಭಕೋಟಿಯ ಲಾಭವ**
**ಕೆಡಿಸಿದುದ ನಾನರಿಯೆನಯ್ಯಾ**
**ಭಕ್ತಿಯ ಕುಳವನರಿಯದೆ ಮತಿಗೆಟ್ಟ ಪರಿಯ**
**ನಾನರಿಯೆನಯ್ಯಾ, ಕೂಡಲಸಂಗನ ಶರಣರ**
**ಸಂಗದಿಂದ ಅರಿದಡೆ**
**ನಾನು ಬದುಕುವೆನಯ್ಯಾ!**

'ಮನುಷ್ಯ ಸದಾ ಪ್ರಕೃತಿಯ ಒಡನಾಡಿಯಾಗಿ ಬದುಕಬೇಕು. ಪ್ರಕೃತಿಯೊಳಗಿನ ಸಾಮರಸ್ಯ ಬಾಳ್ವೆ, ಅದರೊಳಗಿನ ಅವಿನಾಭಾವ ಸಂಬಂಧ ಅರಿತು ಬದುಕುವುದೇ ಜೀವನದ ನಿಜಾರ್ಥ. ವಿವೇಕಪೂರ್ಣ ಸಜ್ಜನರ ಸಂಗದ ಮಾರ್ಗದರ್ಶನದ ಪಥದಲ್ಲಿ ಸಾಗುವುದರಲ್ಲಿ ಬದುಕಿಗೊಂದು ಅರ್ಥ ಮೂಡಲು ಸಾಧ್ಯ. ಕಾಣಿಯ ಲೋಭದಿಂದ ಕೋಟಿಯ ಲಾಭವ ಕಡೆಗಣಿಸುವುದು ಮೂರ್ಖತನದ ಪರಮಾವಧಿ' ಎನ್ನುವಂತಹ ವಿವೇಕಪೂರ್ಣ ಮಾತುಗಳನ್ನು ಬಸವಣ್ಣನವರು ೧೨ನೇ ಶತಮಾನದ ದಿನಗಳ ಹಿಂದೆಯೇ ವ್ಯಕ್ತಪಡಿಸಿದ್ದರು. ಮಾನವನ ಬದುಕಿಗೆ ಪ್ರಕೃತಿ ಎನ್ನುವುದು ಅತ್ಯಂತ ಅನಿವಾರ್ಯತೆಯೇ ವಿನಾ ಮಾನವ ಪ್ರಕೃತಿಗೆ ಅನಿವಾರ್ಯವೆನಿಸಿಕೊಳ್ಳಲು ಸಾಧ್ಯವಿಲ್ಲ. ವಿವೇಕ ಮರೆತು, ಅವಿವೇಕತನದಿಂದ ಮನುಷ್ಯ ವರ್ತಿಸಿದಾಗ , ಪ್ರಕೃತಿಯೇ ಮನುಷ್ಯನಿಗೆ ಒಂದರ್ಥದಲ್ಲಿ ಸಾಮರಸ್ಯ ಭಾವದಿಂದ ಬದುಕುವ ಪಾಠವನ್ನು ಕಲಿಸಿ ಬಿಡುತ್ತದೆಯೇನೋ ಎಂದೆನಿಸಿ ಬಿಡುತ್ತದೆ. ಇಂತಹ ಪ್ರಾಕೃತಿಕವಾಗಿ ಉಂಟಾಗುವ ತಲ್ಲಣಗಳಿಂದ ಮಾನವ ಜನಾಂಗ ಒಂದು ಮಹತ್ವಪೂರ್ಣ ಪಾಠವನ್ನು ಕಲಿಯಬೇಕಾದ ಅನಿವಾರ್ಯತೆಇದೆ.

ಜಗತ್ತಿನ ಸುಮಾರು ೨೦೦ ರಾಷ್ಟ್ರಗಳನ್ನೊಳಗೊಂಡ ವಿಶ್ವಸಂಸ್ಥೆಯ ರಚನೆಯ ಉದ್ದೇಶವೇ ವಿಶ್ವದ ಕಲ್ಯಾಣ ಬಯಸುವುದು. ವಿಶ್ವಕಲ್ಯಾಣವನ್ನು ಯಾವ ಮೂಲಭೂತ ತತ್ತ್ವದ ಆಧಾರದ ಮೇಲೆ ಕ್ರಿಯಾತ್ಮಕವಾಗಿ ತರಬೇಕೆಂಬುದನ್ನು ಅದು ಚಿಂತಿಸುವ ಪ್ರಮೇಯ ಇಂದು ಉದ್ಭವವಾಗಿದೆ. ವಿಶ್ವ ಕಲ್ಯಾಣ ಚಿಂತನೆಯಲ್ಲಿ ಎಂದಿಗೂ ಸ್ವಾರ್ಥಮಯ ಚಿಂತನೆಗಳು ನುಸುಳಬಾರದು. ನಿಸ್ವಾರ್ಥಮಯವಾಗಿ ಜಗ ಹಿತ ಬಯಸುವ ಸಾಕ್ಷಿ ಪ್ರಜ್ಞೆಯಂತೆ ವಿಶ್ವಸಂಸ್ಥೆ ಇರಬೇಕು. ಪ್ರತಿಯೊಂದು ರಾಷ್ಟ್ರಗಳ ಮತ್ತು ಮಾನವ ಜನಾಂಗದ ಕಲ್ಯಾಣ ಬಯಸುವ ಉದ್ದೇಶ ವಿಶ್ವಸಂಸ್ಥೆಯದ್ದಾಗಿದೆ. ಅದೇ ರೀತಿ ಪ್ರತಿಯೊಂದು ಧರ್ಮದ ಸಾರವೂ ಸಹಾ ವಿಶ್ವಸಂಸ್ಥೆಯದ್ದಾಗಿದೆ. ಅದೇರೀತಿ ಪ್ರತಿಯೊಂದು ಧರ್ಮದ ಸಾರವೂ ಸಹಾ ವಿಶ್ವಮಾನವೀಯ ಪ್ರೇಮವನ್ನೇ ಪ್ರತಿನಿಧಿಸುವುದಾದರೂ ಏಕೆ? ಜಗತ್ತಿನಲ್ಲಿ ಇಷ್ಟೊಂದು ಆತಂಕಮಯ ವಾತಾವರಣ, ಪೈಪೋಟಿ ಅಥವಾ ಅನಾರೋಗ್ಯಕರವಾದ ಚಟುವಟಿಕೆಗಳು ಸಾಗುತ್ತಿದೆ ಎನ್ನುವುದನ್ನು ವಿಶ್ವಧರ್ಮದ ವಿಶ್ವ ನಾಯಕರೆಲ್ಲರೂ ಚಿಂತಿಸುವ ಅವಶ್ಯಕತೆಯಿದೆ.

ಬಸವಣ್ಣನವರು ತಮ್ಮೊಂದು ವಚನದಲ್ಲಿ ವಿಶ್ವ ಮಾನವೀಯ ಪ್ರಜ್ಞೆ ಕುರಿತು ವಿಶ್ಲೇಷಿಸುವ ಸಂದೇಶ ವಿಶ್ವನಾಯಕರುಗಳಿಗೆ ಹಾಗೂ ವಿಶ್ವಸಂಸ್ಥೆಯ ಕಾರ್ಯ ಕಲಾಪಗಳ ಉದ್ದೇಶಕ್ಕೆ ಮಾರ್ಗಸೂಚಿಯ ದೀಪಸ್ತಂಭ ವಿದ್ದಂತೆ ಎಂದು ಬಣ್ಣಿಸಬಹುದು.

**ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ**
**ಇವ ನಮ್ಮವ, ಇವ ನಮ್ಮವ, ಇವ ನಮ್ಮವಎಂದೆನಿಸಯ್ಯಾ**
**ಕೂಡಲಸಂಗಮದೇವಾ ನಿಮ್ಮ ಮನೆಯ**
**ಮಗನೆಂದೆನಿಸಯ್ಯಾ!**

ಬಸವಣ್ಣನವರ ಈ ವಚನ ಸಂದೇಶದ ಮುಖ್ಯ ತಿರುಳು ವಿಶ್ವ ಕಲ್ಯಾಣಕ್ಕೆ ಭಾಷ್ಯ ಬರೆದಂತೆ ಎಂದು ಉಲ್ಲೇಖಿಸಬಹುದು. ಒಂದು ರಾಷ್ಟ್ರದ ಪ್ರಗತಿ ಕಂಡು ಮತ್ತೊಂದು ರಾಷ್ಟ್ರ ಅಸಹನೆ, ದ್ವೇಷ ಅಥವಾ ಅಸೂಯೆ ಪಡುವಂತಹ ಪ್ರಸ್ತುತ ಸಂದರ್ಭದಲ್ಲಿ ಬಸವಣ್ಣನವರ ವಿಶ್ವಕಲ್ಯಾಣದ ಆಶಯ ನಮ್ಮೆಲ್ಲರಿಗೂ ಕಣ್ಣು ತೆರೆಸುವುದರ ಮೂಲಕ ವಿಶ್ವಕ್ಕೇ ಕಲ್ಯಾಣ ತತ್ತ್ವ ತೋರುವ ದಿಕ್ಸೂಚಿ ಎಂಬುದರಲ್ಲಿ ಸಂಶಯವೇ ಇಲ್ಲ.

ಇವನಾರು, ಇವನಾರು, ಇವನಾರು ಎಂದು ನಮ್ಮ ಮನಸ್ಸಿನಲ್ಲಿ ಜಾಗೃತವಾಗುವ ಭಾವನೆ ನಮ್ಮ ಮನಸ್ಸಿನ ಸ್ವಾರ್ಥತನದ ಸಂಕೇತವೆಂದು ಅರ್ಥೈಸುವ ಬಸವಣ್ಣನವರ ದೃಷ್ಟಿಯಲ್ಲಿ ಇವನಮ್ಮವ ಎನ್ನುವ ನುಡಿ ಸಂದೇಶದಲ್ಲಿ ವಿಶ್ವಮಾನವೀಯ ಪ್ರಜ್ಞೆಯ ವಿಶ್ವ ಭ್ರಾತೃತ್ವದ ಸಂದೇಶ ಅಡಗಿರುವುದನ್ನು ನಾವು ಮನಗಾಣಬಹುದು. ಇವನಾರು ಎನ್ನುವ ನಮ್ಮೆಲ್ಲರ ಮೂಲ ಪ್ರಶ್ನೆಯಲ್ಲಿ ಯಾರೋ ಬೇರೆಯವರು ಅಂದರೆ ನಮ್ಮವರು ಇದ್ದಾರೆ ಎಂದರ್ಥ. ಇದು ಬಸವಣ್ಣನವರ ದೃಷ್ಟಿಯಲ್ಲಿ ಸ್ವಾರ್ಥ ತನದ ಸಂಕೇತವೆಂದು ಕರೆಯಬಹುದಾಗಿದೆ. ಅದೇ ರೀತಿ ಇವನಾರು ಎಂಬ ಪ್ರಶ್ನೆಯಲ್ಲಿ ನಮ್ಮ ಅಜ್ಞಾನದ ಅಂಧಕಾರವೂ ಒಳಗೊಂಡಿದೆ.

ಪಾರಮಾರ್ಥಿಕ ಚಿಂತನೆಯಲ್ಲಿ ಅವಲೋಕಿ ಸುವುದಾದರೆ ಇಡೀ ವಿಶ್ವವೇ ಭಗವಂತನ ಸೃಷ್ಟಿ. ಅದುವೇ ಆತನ ಮಹಾಮನೆಯೆನಿಸಿಕೊಂಡಿದೆ. ಮಹಾಮನೆಯ ಈ

ಸೃಷ್ಟಿಯ ಜೀವರಾಶಿಗಳೆಲ್ಲವೂ ಪರಮಾತ್ಮನ ಸ್ವರೂಪಿಗಳೇ ಆಗಿರುವಾಗ, 'ಇವನಾರು' ಎಂಬ ಪ್ರಶ್ನೆಯೇ ಅಜ್ಞಾನದ ಪರಕಾಷ್ಠೆಯಲ್ಲವೇ? ಎಂಬ ಪ್ರಶ್ನೆ ಬಸವಣ್ಣನವರದ್ದು. ಬಸವಣ್ಣನವರ ದೃಷ್ಟಿಯಲ್ಲಿ 'ಇವನಾರು'ವೆಂಬ ಪ್ರಶ್ನೆಯೇ ಅಜ್ಞಾನ ಅಥವಾ ಮಹಾಪರಾಧ. ಇದು ಸೃಷ್ಟಿಕರ್ತನಾದ ಭಗವಂತನ ಅಸ್ತಿತ್ವಕ್ಕೆ ಎಸಗುವ ಮಹಾದ್ರೋಹವೆಂಬ ಚಿಂತನೆಯ ಮೂಲಕ ಬಸವಣ್ಣನವರು ವಿಶ್ವವನ್ನು ವಿಶ್ವಾತ್ಮನ 'ಸತ್ ಸ್ವರೂಪ'ವೆಂದು ಭಾವಿಸಬೇಕು ಎನ್ನುತ್ತಾರೆ. ಜಗತ್ತನ್ನೇ ಭಗವಂತನ ಕಮ್ಮಟ ಶಾಲೆ ಎಂದು ಭಾವಿಸಬೇಕೆಂದು ವಿಶ್ವಜನತೆಗೆ ಕರೆ ನೀಡಿರುವುದನ್ನು ನಾವಿಲ್ಲಿ ಕಾಣಬಹುದು.

ಇವನಾರು? ಎನ್ನುವಂತಹ ಸೂಕ್ಷ್ಮವಾದ ಭಾವನೆಯು ನಮ್ಮ ಮನದಾಳದಲ್ಲಿ ಅಡಕವಾಗಿರುತ್ತದೆ. ಅದು ನಮ್ಮ ಅಂತರಂಗದಲ್ಲಿನ ಸೂಕ್ಷ್ಮ ಸ್ವರೂಪದ ಅಹಂಕಾರದ ಪ್ರತೀಕ. ನಾನು, ನನ್ನದು, ನನ್ನಿಂದಲೇ ಎನ್ನುವಂತಹ ಕಾಯಜೀವ ಭಾವದ ಅಹಂ ಪ್ರಜ್ಞೆಯನ್ನು ದಾಟಿದಾಗಲೇ ವಿಶ್ವಪ್ರಜ್ಞೆಯ ವಿಶ್ವಾತ್ಮನನ್ನು ಅರ್ಥೈಸಿಕೊಳ್ಳಲು ಹಾಗೂ ಅದರಲ್ಲಿ ಸಮರಸ ಸಾಧಿಸಲು ಸಾಧ್ಯ ಎನ್ನುವ ವಿಚಾರ ಸರಣಿ ಬಸವಣ್ಣನವರದು. ಅವರ ಭ್ರಾತೃತ್ವದ ವಿಶಾಲ ವ್ಯಾಪ್ತಿಯ ಅರ್ಥವನ್ನು ಇಂದು ವಿಶ್ವಜನತೆ ಅರ್ಥೈಸಿಕೊಳ್ಳಬೇಕು. ಶಾಶ್ವತ ಸತ್ಯ ತತ್ತ್ವವನ್ನು ಆಚರಣೆಯಲ್ಲಿ ತಂದಾಗ ಮಾತ್ರ ವಿಶ್ವಕಲ್ಯಾಣ ಸಾಧಿಸಬಹುದು. ವಿಶ್ವಕಲ್ಯಾಣ ಬಯಸುವ ಸಂಕಲ್ಪ ಹೊತ್ತಿರುವ ವಿಶ್ವ ಸಂಸ್ಥೆಯು ಬಸವಣ್ಣನವರ ಈ ಸಂದೇಶವನ್ನು ಮೂಲಮಂತ್ರವಾಗಿಸಿಕೊಳ್ಳುವುದು ಅತ್ಯಂತ ಪ್ರಸ್ತುತವೆನಿಸುತ್ತದೆ. ವಿಶ್ವಭ್ರಾತೃತ್ವದ ಉನ್ನತಾರ್ಥದ ಆಧ್ಯಾತ್ಮಪೂರ್ಣ ತತ್ತ್ವವನ್ನು ಬಸವಣ್ಣನವರು ವಿಶ್ಲೇಷಿಸಿರುವುದನ್ನು ನಾವಿಲ್ಲಿ ಅರ್ಥೈಸಿಕೊಳ್ಳಬೇಕು.

ಸ್ವಾರ್ಥ, ಅಜ್ಞಾನ ಹಾಗೂ ಸೂಕ್ಷ್ಮಮಯವಾದ ಅಹಂಕಾರವನ್ನು ದಾಟಿದಾಗ ಮಾತ್ರ ಇಡೀ ವಿಶ್ವವೇ ಜಗತ್ಕರ್ತನ ಮಹಾಮನೆ ಎನ್ನಿಸಿಕೊಳ್ಳುತ್ತದೆ. ಅಂತಹ ಸಾಧಕ ಅರ್ಥಪೂರ್ಣ ಸಾಧಕ ಭಕ್ತನಾಗಿ ಅಂದರೆ ಮಹಾಮನೆಯ ಮಗನೆಂದೆನಿಸಿಕೊಳ್ಳಲು ಸಾಧ್ಯ. ಮಹಾಮನೆಯ ಮಗ ಎಂದರೆ ವಿಶ್ವಪ್ರಜ್ಞೆಯ ವಿಶ್ವಮಾನವ ಎಂದರ್ಥ.

ವಿಶ್ವ ಮಾನವೀಯ ಪ್ರಜ್ಞೆ, ವಿಶ್ವ ಭ್ರಾತೃತ್ವ, ಸತ್ಯ, ಪ್ರಾಮಾಣಿಕತೆ ಮತ್ತು ಹೃದಯ ವೈಶಾಲ್ಯತೆಯ ತತ್ತ್ವ ಮೌಲ್ಯಗಳ ಕ್ರಿಯಾತ್ಮಕ ಆಚರಣೆಯಿಂದ ವಿಶ್ವವನ್ನು ಶಾಂತಿಯ ತಾಣವನ್ನಾಗಿಸಬಹುದು ಎನ್ನುವಂತಹದ್ದು ಎಲ್ಲಾ ದಾರ್ಶನಿಕರ ನುಡಿ ಸಂದೇಶಗಳಲ್ಲಿ ಕಾಣಬಹುದಾಗಿದೆ. ವಿಶ್ವದ ಪ್ರಮುಖ ಮಹಾತ್ಮರ ಕಾಲಜ್ಞಾನ ವಚನಗಳ ಸಂದೇಶದಲ್ಲಿಯೂ 'ಅಪ್ರಾಮಾಣಿಕತೆ, ಅಮಾನವೀಯತೆ, ಅನ್ಯಾಯದಂತಹ ಪ್ರಕ್ಷುಬ್ಧ ಸಂದರ್ಭದಲ್ಲಿ ಕೊರೋನಾದಂತಹ ವಿಷಾಣುಗಳು ಜನ್ಮ ತಳೆಯಬಹುದು. ಸತ್ಯ ಮತ್ತು ಪ್ರಾಮಾಣಿಕತೆಗಳಿದ್ದರೆ ಅವು ದೂರವಾಗುವುದರಲ್ಲಿ ಸಂಶಯವಿಲ್ಲ' ಎಂದು ತಿಳಿಸಲಾಗಿದೆ. ಇಂದು ಇಡೀ ವಿಶ್ವವನ್ನೇ ಅತ್ಯಂತ ಪರಿಣಾಮಕಾರಿಯಾಗಿ ಕಾಡುತ್ತಿರುವ ಕೊರೋನಾದಂತಹ ವಿಷಾಣುವಿನ ಭಯದ ವಾತಾವರಣದಲ್ಲಿ ನಾವಿಂದು ಬದುಕು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆ ಒದಗಿಬಂದಿದೆ.

ಒಂದು ಕ್ಷಣದಲ್ಲಿ ವಿಶ್ವದ ಚಿತ್ರಣವನ್ನೇ ಬದಲಿಸಿರುವ ಕೊರೋನಾದಂತಹ ವಿಷಾಣುವಿನ ವಿರುದ್ಧ ಜಗತ್ತಿಂದು ಸಾತ್ವಿಕ ಹೋರಾಟವನ್ನೇ ನಡೆಸಿದೆ. ವೈದ್ಯ ಲೋಕ ವಿಶ್ರಾಂತವಾಗಿ ಲಸಿಕೆ ಮತ್ತು ಔಷಧಿಗಾಗಿ ಶ್ರಮಿಸುತ್ತಿದೆ. ಸರ್ಕಾರಗಳು, ಪೊಲೀಸ್ ಇಲಾಖೆ, ಮಾಧ್ಯಮಗಳು ಜನಜಾಗೃತಿ ಮತ್ತು ಮುನ್ನೆಚ್ಚರಿಕೆಯ ಕ್ರಮಗಳ ಕುರಿತು ಬೆಳಕು ಚೆಲ್ಲುತ್ತಿರುವುದು ಶ್ಲಾಘನೀಯ ಸಂಗತಿ. ನಾವೆಲ್ಲರೂ ಸೂಚನೆ ಮತ್ತು ಮುನ್ನೆಚ್ಚರಿಕೆಯ ಕ್ರಮಗಳನ್ನು ತಪ್ಪದೇ ಪಾಲಿಸಬೇಕು. ಇವುಗಳ ನಡುವೆ ಕೊರೋನಾದಂತಹ ವಿಷಾಣುವನ್ನು ಕೊನೆಗಾಣಿಸುವ ಇನ್ನೊಂದು ಅರ್ಥಪೂರ್ಣ ವಿಧಾನವೆಂದರೆ ನಾವು ಸಾಧ್ಯವಾದಷ್ಟು ಸತ್ಯ, ಪ್ರಾಮಾಣಿಕತೆ ಮತ್ತು ದಯಾಪರತೆಯ ಗುಣ ಮೌಲ್ಯಗಳ ಕ್ರಿಯಾತ್ಮಕತೆಯ ಆರಾಧಕರಾಗಿರಬೇಕು. ಆಗ ಮಾತ್ರ ಎಂತಹ ಸಂದಿಗ್ಧತೆಯ ವಿಷಮ ಪರಿಸ್ಥಿತಿಯನ್ನಾದರೂ ಎದುರಿಸುವ ಆತ್ಮಸ್ಥೈರ್ಯದ ಚಿದ್ಘನ ಬೆಳಕು ನಮ್ಮ ಅಂತರಂಗದಲ್ಲಿಯೇ ಹೊರಹೊಮ್ಮುವುದರಲ್ಲಿ ಸಂಶಯವಿಲ್ಲ. ಆ ಬೆಳಕೇ ಎಲ್ಲಾ ರೀತಿಯ ಅಂಧಕಾರವನ್ನು ಹೋಗಲಾಡಿಸಲು ಸಾಧ್ಯವಿದೆ ಈ ನಿಜಸತ್ಯವನ್ನು ನಾವು ಅರಿಯಬೇಕು.

ಪ್ರತಿಯೊಂದು ರಾಷ್ಟ್ರ, ಪ್ರತಿಯೊಬ್ಬ ವ್ಯಕ್ತಿಯು ವಿಶ್ವಮಾನವೀಯ ಭ್ರಾತೃತ್ವ ತತ್ತ್ವದ ನೆಲೆಯಲ್ಲಿ ಸಾಗಿದಾಗ ಮಾತ್ರ ಬಸವಣ್ಣನವರು ಬಯಸಿದ ವಿಶ್ವಕಲ್ಯಾಣ ಸಾಕಾರಗೊಳ್ಳಲು ಸಾಧ್ಯ. ಆ ಸತ್ಪಥದ ಹಾದಿಯಲ್ಲಿ ನಾವಿಂದು ಸಾಗಬೇಕು. ವಿಶ್ವದೆಲ್ಲೆಡೆ ಅಂತಹ ವಿಶ್ವಭ್ರಾತೃತ್ವ, ಸತ್ಯ ಮತ್ತು ಪ್ರಾಮಾಣಿಕತೆಯ ಭಾವತರಂಗಗಳು ಪ್ರಸರಿಸಿದಾಗ ವಿಶ್ವಶಾಂತಿಯ ಕಲ್ಯಾಣ ಕಾಣಲು ಸಾಧ್ಯ. ಹಾಗೆಯೇ ವಿಶ್ವವು ಎಲ್ಲಾ ಬಗೆಯ ಆತಂಕ, ತಲ್ಲಣ ಹಾಗೂ ಜೀವಭಯದಿಂದ ಮುಕ್ತಗೊಳ್ಳಲು ಸಾಧ್ಯ.



ಕ್ಷೇತ್ರವಾರ್ತೆ

# ಶ್ರೀಮಠದ ದಾಸೋಹಕ್ಕೆ ಕೊಡುಗೆ

ಶ್ರೀಮಠದಲ್ಲಿ ನಿತ್ಯ ನಡೆಯುವ ದಾಸೋಹವನ್ನು ಕಂಡು ಪ್ರಭಾವಿತರಾದ ಭಕ್ತರು ತಮ್ಮ ಶಕ್ತ್ಯಾನುಸಾರ ದವಸ, ಧಾನ್ಯ, ಪರಿಕರಗಳನ್ನು ಸಂಗ್ರಹಿಸಿ ಶ್ರೀ ಸಿದ್ಧಗಂಗಾ ಮಠಕ್ಕೆ ತಂದು ಕೊಡುವ ಸಂಪ್ರದಾಯ ಅನೂಚಾನವಾಗಿ ನಡೆದು ಬರುತ್ತಿರುವುದು ಭಕ್ತರಿಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೂ ಇರುವ ಅವಿನಾಭಾವ ಸಂಬಂಧವನ್ನು ಸೂಚಿಸುತ್ತದೆ.

ಪರಮಪೂಜ್ಯ ಶ್ರೀ ಶ್ರೀಗಳವರು ಸುಗ್ಗಿ ಕಾಲದಲ್ಲಿ ಹಳ್ಳಿಗಳಿಗೆ ಹೋಗಿ ಶ್ರೀಮಠದಲ್ಲಿರುವ ವಿದ್ಯಾರ್ಥಿಗಳಿಗೆ, ನಿತ್ಯ ಬರುವ ಭಕ್ತರಿಗೆ ದಾಸೋಹ ವ್ಯವಸ್ಥೆ ಕಲ್ಪಿಸಲು ಭಿಕ್ಷೆ ಎತ್ತುತ್ತಿದ್ದರು. ನಮ್ಮ ಗ್ರಾಮೀಣ ಬಂಧುಗಳು ಮೊದಲಿನಿಂದಲೂ ಗುರು ಪೀಠಗಳಿಗೆ, ಮಠಗಳಿಗೆ ಭಕ್ತಿಯಿಂದ ನಡೆದುಕೊಂಡು ಬರುತ್ತಿದ್ದಾರೆ. ತಾವು ಬೆವರು ಸುರಿಸಿ ದುಡಿದ ಬೆಳೆಯಲ್ಲಿ, ದವಸ ಧಾನ್ಯವಾಗಲಿ, ತರಕಾರಿಯಾಗಲಿ ತಾವು ಬೆಳೆದ ಬೆಳೆಯಲ್ಲಿ ಸ್ವಲ್ಪ ಭಾಗವನ್ನು ನೈವೇದ್ಯ ರೂಪದಲ್ಲಿ ತೆಗೆದಿರಿಸಿ ಅರ್ಪಿಸುತ್ತಾ ಬರುತ್ತಿದ್ದಾರೆ. ಶರಣರ ಆದರ್ಶ ಜೀವನ ಅವರಲ್ಲಿ ಪರೋಕ್ಷವಾಗಿ ಅಭಿವ್ಯಕ್ತಿಗೊಂಡಿರುವುದು ವ್ಯಕ್ತವಾಗುತ್ತದೆ. ಅವರು ನೀಡುವ ಒಂದೊಂದು ಕಾಳು ಸತ್ಯ ಶುದ್ಧದಿಂದ ಪ್ರಾಮಾಣಿಕತೆಯಿಂದ ಗಳಿಸಿದವುಗಳು. ಹಾಗಾಗಿ ಅವರು ನೀಡುವ ಈ ಗುಪ್ತದಾನ ಶ್ರೀಮಠದ ದಾಸೋಹಕ್ಕೆ ಶ್ರೀರಕ್ಷೆಯಾಗಿದೆ. ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಶ್ರೀಮಠ ನಡೆಸುತ್ತಿರುವ ಈ ಬೃಹತ್ ವ್ಯವಸ್ಥೆಗೆ ನೈತಿಕವಾಗಿ ಬೆಂಬಲ ನೀಡುತ್ತಾ ಬಂದಿದ್ದಾರೆ. ಈ ಪರಂಪರೆ ಸಂಪ್ರದಾಯ ಹಾಗೆಯೇ ಮುಂದುವರಿಯುತ್ತಾ ಬಂದಿದೆ.

ಈ ಸತ್‌ಸಂಪ್ರದಾಯದಂತೆ ಜನವರಿ ೩೧, ೨೦೨೧ ರಂದು ಮಳವಳ್ಳಿ ತಾಲ್ಲೂಕಿನ ೬೩, ಮದ್ದೂರಿನ ಮೂರು ಹಾಗೂ ಚನ್ನಪಟ್ಟಣದ ಮೂರು ಗ್ರಾಮಗಳ ಭಕ್ತರು ಸಂಗ್ರಹಿಸಿ ನೀಡಿದ ೨೨೧ ಕ್ವಿಂಟಾಲ್ ಅಕ್ಕಿ, ೨೦ ಕ್ವಿಂಟಾಲ್ ರಾಗಿ, ೬ ಕ್ವಿಂಟಾಲ್ ಭತ್ತ, ೪ ಸಾವಿರ ತೆಂಗಿನಕಾಯಿ, ೪ ಟನ್ ಕುಂಬಳಕಾಯಿ, ವಿವಿಧ ಬಗೆಯ ಕಾಳು, ಹುಣಸೆಹಣ್ಣು, ಖಾರದಪುಡಿ, ತರಕಾರಿ ಹಾಗೂ ೧.೪೦ ಲಕ್ಷ ರೂ. ಕಾಣಿಕೆಯನ್ನು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಅರ್ಪಿಸಿ ಧನ್ಯತೆಯನ್ನು ಪಡೆದರು.

ಈ ಸಂದರ್ಭದಲ್ಲಿ ಅಂಗರಾಪುರ ಮಠದ ಪೂಜ್ಯ ಶ್ರೀ ಬಸವಲಿಂಗ ದೇಶಿಕೇಂದ್ರ ಸ್ವಾಮಿಗಳು, ನಿವೃತ್ತ ಸೈನಿಕ ಸುರೇಶ್, ನೇಗನೂರು ಶ್ರೀ ಮಲ್ಲೇಶ, ಗೌಡಗೆರೆ ಶ್ರೀ ನಾಗರಾಜಪ್ಪ, ಪುರಸಾವಿ ಶ್ರೀ ರಾಚಪ್ಪ, ನಂಜೇಗೌಡನ ದೊಡ್ಡಿಯ ಶ್ರೀ ಮಹದೇವಸ್ವಾಮಿ ಮೊದಲಾದವರು ಉಪಸ್ಥಿತರಿದ್ದರು.







# ಕ್ಷೇತ್ರವಾರ್ತೆ – ಗಣರಾಜ್ಯೋತ್ಸವ



ಜನವರಿ ೨೬, ರಂದು ಬೆಳಿಗ್ಗೆ ೭.೩೦ಕ್ಕೆ ಶ್ರೀಮಠದಲ್ಲಿ ಹಮ್ಮಿಕೊಂಡಿದ್ದ ೭೨ನೆಯ ಗಣರಾಜ್ಯೋತ್ಸವ ಸಮಾರಂಭದ ದಿವ್ಯಸಾನ್ನಿಧ್ಯವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ವಹಿಸಿದ್ದರು. ಕಾರ್ಯಕ್ರಮದಲ್ಲಿ ತುಮಕೂರು ಜಿಲ್ಲಾ ಉಸ್ತುವಾರಿ ಮತ್ತು ಸಣ್ಣನೀರಾವರಿ ಸಚಿವರಾದ ಸನ್ಮಾನ್ಯ ಶ್ರೀ ಜೆ.ಸಿ. ಮಾಧುಸ್ವಾಮಿರವರು, ತುಮಕೂರು ಗ್ರಾಮಾಂತರ ಶಾಸಕರಾದ ಸನ್ಮಾನ್ಯಶ್ರೀ ಗೌರಿಶಂಕರ್‌ರವರು, ತುಮಕೂರು ನಗರದ ಶಾಸಕರಾದ ಸನ್ಮಾನ್ಯ ಶ್ರೀ ಜ್ಯೋತಿಗಣೇಶ್‌ರವರು, ತುಮಕೂರು ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಾದ ಡಾ. ಕೋ.ನಂ. ವಂಶಿಕೃಷ್ಣರವರು, ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀಮತಿ ಶುಭಕಲ್ಯಾಣ್‌ರವರು ಉಪಸ್ಥಿತರಿದ್ದರು.

ಶ್ರೀ ಜೆ.ಸಿ. ಮಾಧುಸ್ವಾಮಿರವರು ಧ್ವಜಾರೋಹಣವನ್ನು ನೆರವೇರಿಸಿ ಮಾತನಾಡುತ್ತಾ ಇಡೀ ದೇಶ ಗಣರಾಜ್ಯವಾದ ಸಂದರ್ಭವನ್ನು ಎಳೆಎಳೆಯಾಗಿ ತಿಳಿಸಿದರು. ಶ್ರೀಮಠ ಪಾರಂಪರಿಕವಾಗಿ ಪ್ರಾಮಾಣಿಕತೆ ಮತ್ತು ಸಮಾಜ ಸೇವೆಗೆ ಹೆಸರುವಾಸಿಯಾಗಿದ್ದು, ಪೂಜ್ಯರು ಸದಾ ಮಕ್ಕಳಲ್ಲಿ ಈ ಅಂಶಗಳನ್ನು ಜಾಗೃತಗೊಳಿಸುತ್ತಿದ್ದರು. ರಾಷ್ಟ್ರೀಯ ಹಬ್ಬದ ದಿನ ಮತ್ತೊಮ್ಮೆ ಅವುಗಳನ್ನು ನೆನಪು ಮಾಡಿಕೊಂಡು ನಾವೆಲ್ಲರೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹಾಕಿಕೊಟ್ಟ ಹಾದಿಯಲ್ಲಿ ಸ್ವಾಭಿಮಾನದಿಂದ ಬದುಕೋಣವೆಂದು ಕರೆಕೊಟ್ಟರು.

ಅಧ್ಯಕ್ಷತೆ ವಹಿಸಿದ್ದ ಶಾಸಕರಾದ ಸನ್ಮಾನ್ಯ ಶ್ರೀ ಜ್ಯೋತಿಗಣೇಶ್‌ರವರು ಮಕ್ಕಳಿಗೆ ಗಣರಾಜ್ಯೋತ್ಸವ ದಿನಾಚರಣೆಯ ದಿನದ ಶುಭಾಶಯಗಳನ್ನು ಕೋರಿದರು. ಅಂತಿಮವಾಗಿ ಪರಮಪೂಜ್ಯರು ಆಶೀರ್ವಚನ ನೀಡಿ ದೇಶ ಕಾಯುವ ಯೋಧರನ್ನು ನೆನಪಿಸಿಕೊಂಡು ಮಕ್ಕಳಿಗೆ ಅವರು ಮಾದರಿಯಾಗಿದ್ದಾರೆ ಎಂದು ತಿಳಿಸಿದರು.

ಕನ್ನಡ ಪಂಡಿತ್ ಕಾಲೇಜಿನ ಪ್ರಾಂಶುಪಾಲರಾದ ಡಾ|| ಆರ್. ಸೌಮ್ಯಶ್ರೀರವರು ಸ್ವಾಗತಿಸಿದರು. ಬಿ.ಪಿ.ಇಡಿ. ಕಾಲೇಜಿನ ನಿರ್ದೇಶಕರಾದ ಹೆಚ್.ಜಿ. ಗಂಗರಾಜುರವರು ಶರಣು ಸಮರ್ಪಣೆ ಮಾಡಿದರು. ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ ಸಹಶಿಕ್ಷಕರಾದ ಶ್ರೀ ಎಂ. ನಂದೀಶ್ ರವರು ಕಾರ್ಯಕ್ರಮವನ್ನು ನಿರೂಪಿಸಿದರು. ■







ವರದಿ

# ಮಾಗಡಿಯಲ್ಲಿ ಭಕ್ತಿಭಾವದಿಂದ ನಡೆದ ನಡೆದಾಡುವ ದೇವರ ಪುಣ್ಯಸ್ಮರಣೆ



ಮಾಗಡಿ ತಾಲ್ಲೂಕು ಆಧ್ಯಾತ್ಮದ ಮಹಾಬೆಳಗು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಜನ್ಮ ನೀಡಿದ ಪುಣ್ಯಕ್ಷೇತ್ರ. ತ್ರಿವಿಧ ದಾಸೋಹದ ಮೂಲಕ ಭಾರತದ ಭೂಪಟದಲ್ಲಿ ಮಾಗಡಿಗೆ ಒಂದು ವಿಶಿಷ್ಟ ಸ್ಥಾನ, ಗೌರವವನ್ನು ತಂದುಕೊಟ್ಟ ಪರಮಪೂಜ್ಯ ಶ್ರೀಗಳವರ ದ್ವಿತೀಯ ಪುಣ್ಯಸ್ಮರಣೆಯನ್ನು ಹಾಗೂ ೩ನೇ ವರ್ಷದ ಶ್ರೀ ಸಿದ್ಧಲಿಂಗೇಶ್ವರ ಜಯಂತಿಯನ್ನು ಮಾಗಡಿ ತಾಲ್ಲೂಕಿನ ವೀರಶೈವ ಯುವ ಮುಖಂಡರು ಹಾಗೂ ಸ್ವಾಗತ ಸಮಿತಿ ಅಧ್ಯಕ್ಷರು ಮತ್ತು ಶ್ರೀ ಸಿದ್ಧಲಿಂಗೇಶ್ವರ ಜಯಂತಿ ಆಚರಣಾ ಸಮಿತಿಯವರು ಭವ್ಯ ಹಾಗೂ ಅರ್ಥಪೂರ್ಣವಾದ ಸಮಾರಂಭವನ್ನು ಆಯೋಜಿಸಿದ್ದರು.

ಸಮಾರಂಭವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹರಗುರು ಚರಮೂರ್ತಿಗಳು ಹಾಗೂ ಗಣ್ಯರ ಉಪಸ್ಥಿತಿಯಲ್ಲಿ ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯ ವಹಿಸಿದ್ದರು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ನುಡಿ ಸಂದೇಶದಲ್ಲಿ "ಶ್ರೀ ಸಿದ್ಧಲಿಂಗೇಶ್ವರರ ಪರಂಪರೆಯನ್ನು ಪೂಜ್ಯ ಶ್ರೀ ಶಿವಕುಮಾರ ಶ್ರೀಗಳವರು ಮುಂದುವರಿಸಿಕೊಂಡು ಬಂದಿದ್ದಾರೆ. ಶ್ರೀಗಳು ಸಿದ್ಧಗಂಗಾ ಮಠವನ್ನು ಬೆಳೆಸಿ ಸಮಾಜಕ್ಕೆ ಅರ್ಪಿಸಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಕ್ರಾಂತಿ ಮಾಡಿದ್ದಾರೆ. ಮಹಾತ್ಮರ ಸ್ಮರಣೆಯಿಂದ ಜೀವನದಲ್ಲಿ ಮುಕ್ತಿ ಸಾಧ್ಯ. ೧೨ನೇ ಶತಮಾನದಲ್ಲಿ ಸಾಮಾಜಿಕ, ಧಾರ್ಮಿಕ ಕ್ರಾಂತಿ ಮುಂದುವರಿಸಿದ ಕೀರ್ತಿ, ಯಶಸ್ಸು ಶ್ರೀ ತೋಂಟದ ಸಿದ್ಧಲಿಂಗೇಶ್ವರರಿಗೆ ಸಲ್ಲುತ್ತದೆ. ಅವರು ಪಾದಸ್ಪರ್ಶ ಮಾಡಿದ ಭೂಮಿ ಇಂದು ಪುಣ್ಯಕ್ಷೇತ್ರಗಳಾಗಿವೆ. ಅಂತಹ ಪವಿತ್ರ ಪುಣ್ಯಕ್ಷೇತ್ರಗಳಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರವೂ ಒಂದಾಗಿದೆ. ವಿರಕ್ತ ಮಠಗಳ ಪರಂಪರೆಯನ್ನು ಬೆಳೆಸಲು ಮೂಲ ಕಾರಣಕರ್ತರು ಶ್ರೀ ಸಿದ್ಧಲಿಂಗೇಶ್ವರರು" ಎಂದು ಹೇಳಿದರು.

ಶ್ರೀ ಸುತ್ತೂರು ಜಗದ್ಗುರುಗಳು ತಮ್ಮ ಮಂಗಳ ನುಡಿಗಳಲ್ಲಿ "ಅಪಾರ ತಪೋಶಕ್ತಿ ಹೊಂದಿದ್ದ ಪದ್ಮಭೂಷಣ, ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹಾಗೂ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ದಿವ್ಯಚೇತನಗಳು ಎಂದು ಬಣ್ಣಿಸಿದರು. ಶ್ರೀ ಸಿದ್ಧಲಿಂಗೇಶ್ವರರು ಮಹಾತಪಸ್ವಿಗಳಾಗಿದ್ದರು. ಕರ್ನಾಟಕ, ಕೇರಳ, ತಮಿಳುನಾಡಿನಲ್ಲಿ ಸಂಚರಿಸಿ ಜನರಲ್ಲಿ ಧಾರ್ಮಿಕ ಕ್ರಾಂತಿ ಹಾಗೂ ಜ್ಞಾನಬೋಧನೆ ಮಾಡಿದ್ದರು. ಜನರ ಮನಸ್ಸಿನಲ್ಲಿ ಕವಿದಿದ್ದ ಕತ್ತಲೆಯನ್ನು ಹೋಗಲಾಡಿಸಿ ಬೆಳಕಿನ ಕಡೆ ಕೊಂಡೊಯ್ದಿದ್ದರು. ಮೈಸೂರು ಭಾಗದಲ್ಲಿ ಮಲೆ ಮಹದೇಶ್ವರರು, ಈ









ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಾವಚಿತ್ರಕ್ಕೆ ಗಣ್ಯರಿಂದ ಪುಷ್ಪನಮನ

ಭಾಗದಲ್ಲಿ ಸಿದ್ಧಲಿಂಗೇಶ್ವರರು ರಾಜ್ಯದ ಎರಡು ಕಣ್ಣುಗಳಿದ್ದಂತೆ ವಿಜೃಂಭಿಸಿದ್ದಾರೆ ಎಂದು ಬಣ್ಣಿಸಿದರು.

ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಈ ನಾಡು ಕಂಡಂತಹ ಅಪರೂಪದ ಶ್ರೇಷ್ಠ ಸಂತರು. ಜಗತ್ತಿಗೆ ಮಾರ್ಗದರ್ಶನ ನೀಡಿ ಅನುಪಮ ಸೇವೆ ಮನೋಭಾವ ತೋರ್ಪಡಿಸಿದವರು. ಬದುಕಿನಲ್ಲಿ ಪವಾಡಗಳನ್ನು ಮಾಡದೆ ಪವಾಡದ ರೀತಿ ಬದುಕಿದ ಧೀಮಂತರು. ಮನುಷ್ಯನ ಬದುಕನ್ನು ಪವಿತ್ರಗೊಳಿಸಿಕೊಳ್ಳಲು ಇಂತಹ ಮಹಾಸಂತರ ಸ್ಮರಣೆ, ನೆನಪು ಮಹತ್ವದಾಗಿದೆ" ಎಂದರು.

ಇದೇ ಸಂದರ್ಭದಲ್ಲಿ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಅನನ್ಯ ಸೇವೆ ಸಲ್ಲಿಸಿದ ಸಮಾಜದ ಗಣ್ಯರನ್ನು ಸನ್ಮಾನಿಸಲಾಯಿತು.



ಸಮಾರಂಭದಲ್ಲಿ ಬಿಜೆಪಿ ರಾಜ್ಯ ಉಪಾಧ್ಯಕ್ಷರಾದ ಶ್ರೀ ಬಿ.ವೈ. ವಿಜಯೇಂದ್ರ, ಮುಖ್ಯಮಂತ್ರಿಗಳ ರಾಜಕೀಯ ಕಾರ್ಯದರ್ಶಿ ಶ್ರೀ ಎಂ.ಪಿ. ರೇಣುಕಾಚಾರ್ಯ, ಶಾಸಕ ಶ್ರೀ ಎ. ಮಂಜುನಾಥ, ವೀರಶೈವ ಲಿಂಗಾಯತ ಅಭಿವೃದ್ಧಿ ನಿಗಮದ ಅಧ್ಯಕ್ಷ ಶ್ರೀ ಬಿ.ಎಸ್. ಪರಮಶಿವಯ್ಯ, ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷ ಶ್ರೀ ಎಂ. ರುದ್ರೇಶ್, ನಿವೃತ್ತ ಪೊಲೀಸ್ ಮಹಾನಿರ್ದೇಶಕ ಡಾ. ಶಂಕರ ಬಿದರಿ, ವಿಧಾನ ಪರಿಷತ್ ಸದಸ್ಯ ಶ್ರೀ ಅ. ದೇವೇಗೌಡ, ಬೆಂಗಳೂರು ನಗರ ಜಿಲ್ಲಾ ಪಂಚಾಯಿತಿ ಅಧ್ಯಕ್ಷ ಶ್ರೀ ಮರಿಸ್ವಾಮಿ, ಮಾಜಿ ಶಾಸಕ ಶ್ರೀ ಹೆಚ್.ಸಿ. ಬಾಲಕೃಷ್ಣ, ಕಾರ್ಯಕ್ರಮದ ರೂವಾರಿ ಶ್ರೀ ಕೆ.ಪಿ. ಮಹದೇವ ಶಾಸ್ತ್ರಿ, ಮೇಲಣಗವಿ ಮಠದ ಪೂಜ್ಯ ಶ್ರೀ ಶಾಂತಮುನಿ ಶಿವಾಚಾರ್ಯ ಸ್ವಾಮೀಜಿ, ಗದ್ದುಗೆ ಮಠದ ಪೂಜ್ಯ ಶ್ರೀ ಮಹಂತ ಸ್ವಾಮಿಗಳು, ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಬಸವಲಿಂಗ ಸ್ವಾಮಿಗಳು, ಬೆಟ್ಟಹಳ್ಳಿ ಮಠದ ಪೂಜ್ಯ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮೀಜಿ, ಜಡೇದೇವರ ಮಠದ ಪೂಜ್ಯ ಶ್ರೀ ಇಮ್ಮಡಿ ಬಸವರಾಜ ಸ್ವಾಮೀಜಿ, ಪವಾಡ ಬಸವಣ್ಣದೇವರ ಮಠದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮೀಜಿ ಮೊದಲಾದವರು ಉಪಸ್ಥಿತರಿದ್ದರು.

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104